# ಮಾನಸಿ

ತಿಂಗಳ ಪತ್ರಿಕೆ
ಜೂನ್ : 2001

ಶಾಸ್ತ್ರ ಅವರಿಗಿರಲಿ, ಕಲೆ ನಮಗಿರಲಿ

ಸಮಯ ಎನ್ನುವುದು ಮಹಿಳೆಯರ ವೈಯಕ್ತಿಕ ಸಮಸ್ಯೆಯೇ?

ರೆಕ್ಕೆಗಳೇ ಹುಟ್ಟುವಿರಾ?

ಜಂಟ್ಸ್ ಅಂದ್ರೆ ಜನರಲ್

ಬುದ್ಧ ನಗಬೇಡ

## ಮಾನಸ
ತಿಂಗಳ ಪತ್ರಿಕೆ

ಸಂಪುಟ : 20 ಸಂಚಿಕೆ : 6
ಜೂನ್ : 2001

**ಸಂಪಾದಕೀಯ ಮಂಡಳಿ :**
ರಾಜೇಶ್ವರಿ ಎಚ್. ಎಸ್.
ಚಂಪಾವತಿ ಎಚ್. ಎಸ್., ಸರಸ್ವತಿ ದು.
ಸವಿತ ಎ., ಗೀತಾ, ವೆಂ. ವನಜಾ, ನೀಲಾಂಜನ
ಶ್ಯಾಮಲ, ಬಿ. ಎನ್. ಶಾರದ
ಹೆಚ್. ಎಸ್. ಪುಷ್ಪ, ಜಿ. ವಿ. ವೇದವಲ್ಲಿ
ಲಕ್ಷ್ಮಿ ಎ., ವತ್ಸಲಾ ವೈ.ಎಸ್.

**ಸಲಹೆ - ಸಹಕಾರ :**
ಇಳಾ ವಿಜಯಾ

ವಿಳಾಸ
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **4-00** ರೂ.
ವಾರ್ಷಿಕ ಚಂದಾ **50-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

*ಈ ಸಂಚಿಕೆಯಲ್ಲಿ......*



ಮಾನಸ ಪ್ರತಿಗಳಿಗಾಗಿ

**ಮೈಸೂರು**

*ಮೈಸೂರಿನಲ್ಲಿರುವ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ*

**ವೆಂ. ವನಜ**

ಎಲ್. 3, ಏಳನೇ ತಿರುವು, ವಿ.ವಿ. ವಸತಿ ಗೃಹ
ಮಾನಸ ಗಂಗೋತ್ರಿ, ಮೈಸೂರು - 570 006

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067



# ಸಂಪಾದಕೀಯ

ಉದಾರೀಕರಣ, ಖಾಸಗೀಕರಣ, ಹಾಗೂ ಜಾಗತೀಕರಣ ಪ್ರತಿಕ್ರಿಯೆಯು ಭಾರತೀಯರ ಜೀವನದ ವಿವಿಧ ಮಗ್ಗುಲುಗಳ ಮೇಲೆ ಬೀರಿದ ಪರಿಣಾಮದ ತೀವ್ರತೆಯನ್ನು ಅಳೆಯ ಬೇಕೆಂದರೆ ಈ ದೇಶದ ಅತ್ಯಂತ ಶೋಷಿತ ಜನಾಂಗಗಳ ಮೇಲೆ ಉಂಟುಮಾಡಿದ ಪರಿಣಾಮವನ್ನು ಗಮನಿಸಬೇಕಾಗುತ್ತದೆ. ಇದು ಮಹಿಳೆಯರ ಹಿಂದುಳಿದ, ಹರಿಜನ, ಗಿರಿಜನರ ಬದುಕುವ ಹಕ್ಕಿನ ಮೇಲೆ ಬೀರುತ್ತಿರುವ ಪರಿಣಾಮವಾಗಿರಬಹುದು. ಈ ಪ್ರಕ್ರಿಯೆಯು ನಮ್ಮ ಸಾಂಪ್ರದಾಯಿಕ ಪಿತೃಪ್ರಧಾನ ಎಳೆಗಳೊಂದಿಗೆ ಸುಲಭವಾಗಿ ಬೆಸೆದುಕೊಳ್ಳುವುದರಿಂದ ಮಹಿಳೆಯರು ಅನಿವಾರ್ಯವಾಗಿ ಅಷ್ಟೇ ಸುಲಭವಾಗಿ ಸಂಕೀರ್ಣತೆಯ ಬಲೆಯಲ್ಲಿ ಬೀಳುತ್ತಾರೆ.

ಜಾಗತೀಕರಣದ ಬಿರುಗಾಳಿಯ ಅಲೆಯಲ್ಲಿ ಸರ್ಕಾರದ ಅಸ್ತಿತ್ವವೇ ಪ್ರಶ್ನಾರ್ಹವಾಗಿದೆ. ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಎತ್ತಿಹಿಡಿದುಬೇಕಾದ ಸರ್ಕಾರ ನಿಷ್ಕ್ರಿಯವಾದ ಧೋರಣೆಯನ್ನು ತಾಳುತ್ತಿದೆ. ಹಾಗಾಗಿ ಮಹಿಳೆಯರ ಮೇಲೆ ನಡೆಯುತ್ತಿರುವ ಕೌಟುಂಬಿಕ ಹಿಂಸೆಯ ಪ್ರಮಾಣ ತೀವ್ರಗತಿಯಲ್ಲಿ ಹೆಚ್ಚುತ್ತಿದೆ. ಭದ್ರತೆಯನ್ನು ನೀಡುವಲ್ಲಿ ಹಲವಾರು ಮಿತಿಗಳು ಹಿಂದೆ ಕಂಡುಬರುತ್ತಿದ್ದರೂ, ಇಂದು ಭದ್ರತೆಯ ಕಲ್ಪನೆಯೆ ಧೂಳೀಪಟ ಗೊಳ್ಳುತ್ತಿದೆ. ವ್ಯಕ್ತಿವಾದಕ್ಕೆ ನೀಡುವ ಒತ್ತು ಹೆಚ್ಚುತ್ತಾ ಹೋಗುತ್ತಿದೆ. ತಮ್ಮ ಅಸ್ತಿತ್ವದ ನೆಲೆಗಾಗಿ ಮಹಿಳೆಯರು ಸೆಣೆಸಬೇಕಾದ ಅಂಶಗಳು ಸಂಕೀರ್ಣತೆಯನ್ನು ಪಡೆಯುತ್ತವೆ. ಅವಳ ಹೆಗಲ ಮೇಲಿನ ಭಾರ ದ್ವಿಗುಣಗೊಳ್ಳುತ್ತಿದೆ.

ಸರ್ಕಾರದ ನಿಷ್ಕ್ರಿಯತೆಯಿಂದಾಗಿ ಮಹಿಳೆಯರಿಗೆ ಸಾಮಾಜಿಕ ಭದ್ರತೆಯು ಸಿಗುವುದು ದುಸ್ತರವಾಗುತ್ತಿದೆ. ಸಾಮಾಜಿಕ ನ್ಯಾಯದ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಹೋರಾಟ ನಡೆಸುವಾಗ ಅವುಗಳನ್ನು ಸುಲಭವಾಗಿ ಪೊಲೀಸ್ ವ್ಯವಸ್ಥೆಯೊಂದಿಗೆ ಹತ್ತಿಕ್ಕಲಾಗುತ್ತದೆ. ಪೊಲೀಸ್ ದೌರ್ಜನ್ಯ ಹೆಚ್ಚುತ್ತಿದೆ. ಪ್ರತಿಭಟಿಸುವ ಹಕ್ಕನ್ನೂ, ಧ್ವನಿಯನ್ನು ಜನರು ಕಳೆದುಕೊಳ್ಳುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ಶೋಷಿತ ಜನಾಂಗಗಳ ಹೋರಾಟದ ದೃಷ್ಟಿಕೋನದಲ್ಲಿ ಮೂಲಭೂತ ಬದಲಾವಣೆಯಾಗಬೇಕಿದೆ. ಹೋರಾಟದ ತಾತ್ವಿಕ ನೆಲೆಯು ಪ್ರಸ್ತುತ ಬಿಕ್ಕಟ್ಟಿನ ಮೂಲದಿಂದ ಮೂಡಿಬರಬೇಕಾಗಿದೆ. ಇದು ಸಾಧ್ಯವಾಗುವುದು ಶೋಷಿತ ಜನರು ತಮ್ಮ ತಾತ್ವಿಕ ಭಿನ್ನಾಭಿಪ್ರಾಯಗಳನ್ನು ಮರೆತು ತಮ್ಮನ್ನು ತುಳಿಯುತ್ತಿರುವ ಶಕ್ತಿಗಳನ್ನು ಎದುರಿಸಬೇಕಾಗಿದೆ, ಪ್ರತಿಭಟಿಸಬೇಕಾಗಿದೆ, ಒಕ್ಕೊರಲಿನಿಂದ ಧ್ವನಿ ಎತ್ತಬೇಕಾಗಿದೆ.

*–ಸಂಪಾದಕೀಯ ಮಂಡಳಿ*

# ಶಾಸ್ತ್ರ ಅವರಿಗಿರಲಿ, ಕಲೆ ನಮಗಿರಲಿ........

❐ ಎಂ. ಉಷಾ

**ಸಾ**ಹಿತ್ಯದ ವಿಭಜನಾಕ್ರಮವು ಸಾಹಿತ್ಯೇತರ ನೆಲೆಯಿಂದ ಹೊರಟದ್ದಾಗಿರಬಹುದೇ ಎಂಬ ಚರ್ಚೆ ಕನ್ನಡ ವಿಮರ್ಶೆಯ ಉದ್ದಕ್ಕೂ ನಡೆಯುತ್ತಲೇ ಬಂದಿದೆ. ಈ ಚರ್ಚೆ ಆರಂಭ ಗೊಂಡದ್ದು ಸಾಹಿತ್ಯ ಚರಿತ್ರೆಗಳ ನಿರ್ಮಾಣದ ಹಂತದಲ್ಲಿ. ಸಾವಿರ ವರ್ಷದ ಹರವಿನಲ್ಲಿ ಹರಡಿದ ಸಾವಿರಕ್ಕೂ ಮಿಕ್ಕ ಪ್ರತಿಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಹೇಗೆ ಓರಣಗೊಳಿಸಬೇಕೆಂಬ ಮಹತ್ವಾಕಾಂಕ್ಷೆಯಲ್ಲಿ. ಇದು ಮೇಲು ನೋಟಕ್ಕೆ ಕಂಡುಬರುವ ಅಂಶ. ವಾಸ್ತವದಲ್ಲಿಯಾದರೆ ಸಾಹಿತ್ಯದ ವಿಭಜನಾಕ್ರಮ ವೆನ್ನುವುದು ಕೇವಲ ವರ್ಗೀಕರಣವೋ, ಅಧ್ಯಯನ ಅನುಕೂಲತೆಯನ್ನೋ ಮಾತ್ರ ಈಡೇರಿಸುವುದಾಗಿದೆ. ಅದು ತನ್ನದೇ ಆದ ಗ್ರಹಿಕೆಯ ಕ್ರಮವನ್ನು ರೂಪಿಸುವ, ಒತ್ತಾಯಿಸುವ ಕೆಲಸವನ್ನು ಮಾಡುವು ದಾಗಿರುತ್ತದೆ. ಹಾಗಾಗಿಯೇ ಈ ಕುರಿತ ವಾಗ್ವಾದಗಳೂ ಅವಕಾಶ ಸಿಕ್ಕಲ್ಲೆಲ್ಲ ತಲೆ ಎತ್ತುತ್ತಲೇ ಇರುತ್ತದೆ. 'ಮಹಿಳಾ ಸಾಹಿತ್ಯ' ಎಂಬ ಪರಿಕಲ್ಪನೆಯ ಆಧಾರದ ಮೇಲೆ ರೂಪು ಗೊಂಡಿರುವ ಲಿಂಗಾಧಾರಿತ ವಿಭಜನಾ ಕ್ರಮವೂ ಅಂತಹುದೇ ಒಂದು ಒತ್ತಾಯವನ್ನು ಕನ್ನಡ ಸಾಹಿತ್ಯದ ಮೇಲೆ ತರುವುದಾಗಿದೆ. ಮಹಿಳಾ ರಾಜಕಾರಣವನ್ನು ಬೆನ್ನಿಗಿಟ್ಟು ಕೊಂಡು ಬಳಕೆಗೆ ಬಂದಿರುವ ಈ ವರ್ಗೀಕರಣದ ಕುರಿತ ಬೇಕು ಬೇಡದ ಚರ್ಚೆಗಳು ಕಳೆದ ಶತಮಾನದ ಪ್ರಮುಖ ಸಾಹಿತ್ಯ ಸಂಗತಿಗಳಲ್ಲಿ ಒಂದಾಗಿರುವುದರಿಂದ ಆ ಚರ್ಚೆಗೆ ಪೂರಕವಾದ ಒಂದಿಷ್ಟು ಮಾಹಿತಿಯನ್ನು ಇತಿಹಾಸದಿಂದ ಹೆಕ್ಕಿ ಕೊಡುವುದು ಈ ಲೇಖನದ ಉದ್ದೇಶ.

ಕಳೆದ ಶತಮಾನದ ಕೊನೆಯ ದಶಕಗಳಲ್ಲಿ ಬಿರುಸಿನಿಂದ ನಡೆದ ಮಹಿಳಾ ಸಾಹಿತ್ಯ ಪರಿಕಲ್ಪನೆಯ ಚರ್ಚೆ ವಾಸ್ತವವಾಗಿ ಆರಂಭಿಕ ದಶಕಗಳಲ್ಲೇ ಹುಟ್ಟಿಕೊಂಡಿದ್ದಾಗಿದೆ. ಆಧುನಿಕ ಚಿಂತನೆಗಳ ಒತ್ತಾಸೆಯೊಂದಿಗೆ ದೊರೆತ ಸ್ತ್ರೀ ಶಿಕ್ಷಣದ ಪರಿಣಾಮವಾಗಿ ಶತಮಾನಾರಂಭದ ಹೊತ್ತಿಗೆ ಮಹಿಳೆಯರು ಆಧುನಿಕ ಸಾಹಿತ್ಯ ರಚನೆಯಲ್ಲಿ ಕಣ್ ಕಾಣುವ ಮಟ್ಟಿಗೆ ತೊಡಗಿಸಿಕೊಂಡರು ಎಂಬುದೀಗ ನಿರೂಪಿತ ಸತ್ಯ. ಈ ಸತ್ಯದೊಂದಿಗೆ ಗಮನಿಸಿಕೊಳ್ಳಬೇಕಾದ ಇನ್ನೊಂದು ಪ್ರಮುಖ ವಿಚಾರ ತಮ್ಮ ಸಾಹಿತ್ಯ ಕುರಿತ ತಾತ್ವಿಕ ಸಮರ್ಥನೆಯನ್ನು ಕೂಡ ಆ ಲೇಖಕಿಯರು ಸಾಧ್ಯವಾದಷ್ಟು ಪ್ರಬಲವಾಗಿ ನಡೆಸಿದರು ಎಂಬುದು.

ಪ್ರಸ್ತುತ ಸಂದರ್ಭದಲ್ಲಿ ಜನಪ್ರಿಯ ಸಾಹಿತ್ಯ, ಅಡಿಗೆ ಮನೆ ಸಾಹಿತ್ಯ ಇತ್ಯಾದಿ ಶ್ಲೇಷಾರ್ಥಗಳನ್ನು ಪಡೆದುಕೊಂಡಿರುವ ಮಹಿಳಾ ಸಾಹಿತ್ಯ ಪರಿಕಲ್ಪನೆಯು ಆರಂಭಿಕ ದಿನಗಳಲ್ಲಿ ಅತ್ಯಂತ ವ್ಯವಸ್ಥಿತವಾಗಿ ಕಟ್ಟಿದುದಾಗಿವೆ. ತನ್ನ ಕಾಲದ ಸಾಂದರ್ಭಿಕ ಚರ್ಚೆಗಳಾದ ಮಾರ್ಗ ಹಾಗು ದೇಸಿ ಚಿಂತನೆಗಳೆರಡನ್ನೂ ಆಧುನಿಕ ಚಿಂತನೆಯೊಂದಿಗೆ ಕಸಿ ಮಾಡಿ ರೂಪಿಸಿದ್ದಾಗಿದೆ. ಆ ಮೂಲಕ ಭಾರತೀಯ ಕಾವ್ಯಮೀಮಾಂಸೆ ಹಾಗೂ ದೇಸಿ ಕಾವ್ಯ ಕಲ್ಪನೆಗಳೆರಡರ ನೆಲೆಯಿಂದಲೂ ಆ ಪರಿಕಲ್ಪನೆಯನ್ನು ನಿರ್ವಹಿಸಿಕೊಳ್ಳುವ ಪ್ರಯತ್ನ ನಡೆಸಲಾಗಿದೆ.

ಹಳಗನ್ನಡ ಸಾಹಿತ್ಯಕ ಸಂಪಾದನೆ ಹಾಗೂ ಹೊಸಗನ್ನಡ ಸಾಹಿತ್ಯ ರಚನೆಗಳೆರಡರ ಜೊತೆಗೆ 1920ರ ಆಸುಪಾಸಿನಲ್ಲಿ ದೇಸಿ ವಿದ್ವಾಂಸರಿಂದ ಆರಂಭಗೊಂಡ ಜನಪದ ಸಾಹಿತ್ಯ ಸಂಗ್ರಹಣಾ ಕಾರ್ಯದ ಸಾಂದರ್ಭಿಕ ಮಾತುಗಳು ಮಹಿಳಾ ಸಾಹಿತ್ಯದ ಸೈದ್ಧಾಂತಿಕತೆಯನ್ನು ರೂಪಿಸಿಕೊಳ್ಳಲು ಸಹಕಾರಿಯಾದವು. ಜನಪದ ಸಾಹಿತ್ಯವನ್ನು 'ಗರತಿಯ ಹಾಡು' ಎಂದು ಗುರುತಿಸುವ ಮೂಲಕ ಮೊದಲ ಬಾರಿಗೆ ಆ ಸಾಹಿತ್ಯದ ಕರ್ತೃತ್ವವು ಮಹಿಳೆಯರಿಗೆ ದೊರೆಯಿತು. ಹಾಗೆಯೇ ಜನಪದ ಸಾಹಿತ್ಯವನ್ನು ಎಲ್ಲ ಸಾಹಿತ್ಯಗಳ ಮೂಲವೆಂದು ಗುರುತಿಸುವ ಮೂಲಕ ಸಾಹಿತ್ಯ ರಚನೆ ಹೆಣ್ಣುಮಕ್ಕಳ ಜನ್ಮಜಾತ ಕಲೆ, ಸ್ವಭಾವಸಿದ್ಧ ಗುಣ ಎಂಬ ಅಭಿಪ್ರಾಯವು ಮುಂಚೂಣಿಗೆ ಬಂದಿತು.

'ಜೀವನವೇ ದೇವತೆಯಾದ, ತ್ರಿಪದಿ ಛಂದದಲ್ಲಿ ಹೊರ ಹೊಮ್ಮಿದ 'ಗರತಿಯ ಹಾಡಿನ' ಋಷಿಗಳು ಹೆಣ್ಣುಮಕ್ಕಳು. ನಮ್ಮ ತಾಯಿ ತಂಗಿಯರು, ಅಮ್ಮ ಅಕ್ಕಂದಿರು, ಮಡದಿ ಮಕ್ಕಳು. ಹಾಗೆ ವಿಚಾರಿಸಿ ನೋಡಿದರೆ ಅವರದೇ ನಿಜವಾದ ಕಾವ್ಯ. ಉಳಿದುದು ಕಾವ್ಯದ ಛಾಯೆ. ಕಾವ್ಯವು ಕಾಂತಾ ಸಮ್ಮಿತಿಯೆಂದು ಹೇಳುವರಷ್ಟೆ. ಕಾಂತೆಯ ಮಾತಿನಂತಿರುವುದೇ ಕಾವ್ಯವಾದರೆ ಕಾಂತೆಯರ ಮಾತೆ ಕಾವ್ಯದ ಮಾತೆಯಲ್ಲವೆ? ನಾವು ಕಾವ್ಯ ಎಂದು ಕರೆಯುವುದು ಅದರದೊಂದು ಸಂತಾನ. ಕಾಂತೆಯ ಮಾತೆ ಕಾವ್ಯಮಾತೆ! ವೇದಕ್ಕೆ ಮಣಿಯದವರು, ಶಾಸ್ತ್ರಕ್ಕೆ ಒಗ್ಗದವರು.

ಕಾಂತೆಯರ ಮಾತಿಗೆ ಮೆತ್ತಗೆ ಹಣ್ಣಾಗುವುದನ್ನು ಕಂಡೇ ವೇದಶಾಸ್ತ್ರದ ತಿರುಳು ಕಾವ್ಯ ಮೋಹಿನಿಯ ಅವತಾರವನ್ನೆ ತಳೆದಿತು. ಇಲ್ಲಿ ಕಾಂತೆಯೆಂಬ ಮಾತನ್ನು 'ಹೆಂಡತಿ' ಎಂಬ ಸಂಕುಚಿತಾರ್ಥದಲ್ಲಿ ತಿಳಿದುಕೊಳ್ಳದೆ ಸ್ತ್ರೀಜಾತಿ ಸಾಮಾನ್ಯವೆಂದೇ ತಿಳಿಯಬೇಕು (ಹಲಸಂಗಿ ಗೆಳೆಯರು, ಗರತಿಯಹಾಡು, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು 1990, ಪುಟ 11)

ಬೇಂದ್ರೆಯವರ ಮೇಲಿನ ಪ್ರಾಸಂಗಿಕ ಮಾತುಗಳು ಆ ಹೊತ್ತಿನ ಲೇಖಕಿಯರ ಮೇಲೆ ಎಷ್ಟು ಪ್ರಭಾವ ಬೀರಿತೆಂಬುದಕ್ಕೆ ಅಂದಿನ ಪ್ರಮುಖ ಲೇಖಕಿ ಹಾಗು ಮಹಿಳಾ ಚಟುವಟಿಕೆಗಳ ಪ್ರಮುಖ ಕಾರ್ಯಕರ್ತೆಯಾಗಿದ್ದ ಶ್ಯಾಮಲಾದೇವಿಯವರ ಕೆಳಗಿನ ಮಾತುಗಳನ್ನು ಗಮನಿಸಬಹುದು. ಅದರೊಂದಿಗೆ ಸಾಹಿತ್ಯ ಚರ್ಚೆಯ ಪ್ರಾಸಂಗಿಕ ಮಾತುಗಳನ್ನು ಮಹತ್ವದ ತಾತ್ವಿಕ ಚರ್ಚೆಯಾಗಿ ಬಳಸಿಕೊಂಡ ಜಾಣ್ಮೆಯನ್ನು ಕಾಣಬಹುದು.

'ವಿದ್ಯೆಗೆ ಅಧಿಪತಿ ಸಿದ್ಧಿವಿನಾಯಕ (ಪುರುಷ)ನಾದರೆ, ಹೃದಯಂಗಮ ಸಾಹಿತ್ಯವಾದ ಕಾವ್ಯಕ್ಕೆ ಸರಸ್ವತಿ (ನಾರಿ)ಯು ಅಧಿಪತಿಯಾದಳು. ಸ್ತ್ರೀ ನುಡಿದುದೇ ಕಾವ್ಯ. ಏಕೆಂದರೆ ಸ್ತ್ರೀವಾಣಿಗೆ ಹೃದಯವನ್ನರಳಿಸಿ ಜೀವನವನ್ನು ಸಂಸ್ಕರಿಸುವ ಶಕ್ತಿ ಇರುವುದು. ಕಾವ್ಯವು ಆ ವಾಣಿಯನ್ನು ಅಳವಡಿಸಿ ಕೊಳ್ಳಬೇಕು. ಕಾವ್ಯದ ಸ್ವರೂಪದ ಕಲ್ಪನೆಯನ್ನು ಕೊಡುವುದಕ್ಕಾಗಿ ಕಾಂತಾ ಸಮಿತ ಎಂಬ ಸೂತ್ರದಲ್ಲಿ ಹೇಳಿದುದಾದರೂ ಈ ಮಾತನ್ನೇ ಬಲಪಡಿಸುವುದು; ಸ್ಪಷ್ಟಪಡಿಸುವುದು. ಕಾವ್ಯವು ಕಾಂತಾ ವಚನದಂತೆ ಮಂಜುಳವೂ ಮಧುರವೂ ಸುಂದರವೂ ಆಗಿದೆ ಎಂದೇ ಇದರ ಅರ್ಥ. ಕಾಂತಾ ಎಂದರೆ ಪ್ರಿಯೆ ಅಥವ ಹೆಂಡತಿ ಎಂಬ ಅರ್ಥದಲ್ಲಲ್ಲ. ಇದು ಸ್ತ್ರೀ ಜಾತಿ ಎಂಬ ವ್ಯಾಪಕಾರ್ಥದಲ್ಲಿರುವುದು. ಇನ್ನೀ ಪ್ರೌಢ ಕಾವ್ಯ ಲೋಕದಿಂದ ಇನ್ನೊಂದು ವಿಶಾಲ ಪ್ರಪಂಚಕ್ಕೆ ಹೋಗೋಣ. ಅಲ್ಲಿ ನಮ್ಮ ಹಳ್ಳಿಯ ಹೆಣ್ಣುಮಕ್ಕಳು ದೊಡ್ಡದೊಂದು ತೋಟವನ್ನೇ ಕೃಷಿ ಮಾಡಿದ್ದಾರೆ.....ಆ ತೋಟವೆಂದರೆ ಜೀವನ ಸಂಗೀತಗಳದು, ಗರತಿಯ ಹಾಡುಗಳದು ಎಂದು ನೀವು ಈಗಾಗಲೇ ಗ್ರಹಿಸಿರಬಹುದೆಂದು ನಾನು ತಿಳಿದಿದ್ದೇನೆ....ಅವುಗಳಲ್ಲಿ ನಮಗಿಂದು ನಾದರಸ ಸೌಂದರ್ಯಗಳ ದರ್ಶನವಾಗ ತೊಡಗಿದೆ. ಅವುಗಳಿಂದ ಆನಂದದ ಅನುಭವ ವಾಗುತ್ತಿದೆ. ಇವು ನಿಜವಾಗಿಯೂ ಕಾವ್ಯಗಳು. ಸಾಹಿತ್ಯವು ಜನಜೀವನದ ಪ್ರತಿಬಿಂಬವಾದುದರಿಂದ ಹಳ್ಳಿಯ ಹಾಡುಗಳೆಂದರೆ ಶ್ರೇಷ್ಠ ಸಾಹಿತ್ಯವೇ ಸರಿ. ಈಗ ಈ ಸಾಹಿತ್ಯಕ್ಕಿದ್ದ ಅಸ್ಪೃಶ್ಯತೆಯು ಕಳೆದು ಹೋಗಿದೆ. ಇಂದು ಪಂಡಿತರು ಸಾಹಿತ್ಯ ಮಂದಿರದಲ್ಲಿ ಮಾನ್ಯವಾದ ಸ್ಥಾನವನ್ನು ಇದಕ್ಕೆ ಕೊಡುತ್ತಿದ್ದಾರೆ. ಈ ಗರತಿಯ ಹಾಡುಗಳೆಲ್ಲ ಹೆಣ್ಣುಮಕ್ಕಳ ಕೃತಿಗಳು (ಜಯಕರ್ನಾಟಕ ಪತ್ರಿಕೆ, 1939)

ಮೇಲಿನ ಎರಡೂ ಹೇಳಿಕೆಗಳನ್ನು ಗಮನಿಸುವುದಾದರೆ ಅಲ್ಲಿ ಶ್ಯಾಮಲಾದೇವಿಯವರು ಬೇಂದ್ರೆಯವರ ಗರತಿಯ ಹಾಡಿನ ಮಾತಿನ ಜಾಡನ್ನೇ ಹಿಡಿದು ಹೊರಟಿರುವುದು ಕಂಡುಬರುತ್ತದೆ. ಆದರೆ ಅದನ್ನು ಮಂಡಿಸುವ ಕ್ರಮ ಭಿನ್ನ ಸೈದ್ಧಾಂತಿಕತೆಯನ್ನು ಹೊಂದಿದ್ದಾಗಿದೆ. ಮೊದಲಿಗೆ ದೇಸಿ ಪರಂಪರೆಗೆ ಸರಿದೂಗುವ ತೆರದಲ್ಲಿಯೇ ಮಾತಿನ ಪರಂಪರೆಯಲ್ಲಿಯೂ ಸ್ತ್ರೀ ಕರ್ತೃತ್ವದ ತರ್ಕವನ್ನು ಮಂಡಿಸುವ ಕ್ರಮ ಆವಿಷ್ಕರಿಸಿಕೊಳ್ಳುತ್ತಾರೆ. ಆ ನಂತರ ದೇಸಿ ಕಾವ್ಯದ ವಿಚಾರವನ್ನು ಪುನರುಕ್ತಿಗೊಳಿಸಿ ಆ ಕಾವ್ಯಕ್ಕಿದ್ದ ಅಸ್ಪೃಶ್ಯತೆಯು ಕಳೆಯ ಹೊರಟಿದ್ದರ ಪ್ರಸ್ತಾಪ ಮಾಡುತ್ತಾರೆ. ಬೇಂದ್ರೆಯವರು ಭಾವುಕ ನೆಲೆಯಲ್ಲಿ, ಪ್ರೋತ್ಸಾಹದಾಯಕ ಸ್ವರೂಪದಲ್ಲಿ ಆಡಿದ್ದ ಮಾತನ್ನು ಹಿಡಿದು ಅದನ್ನೇ ಒಂದು ಸಾಹಿತ್ಯಿಕ ಚರ್ಚೆಯಾಗಿ ಬೆಳೆಸುತ್ತಾರೆ. ಜನಪದ ಸಾಹಿತ್ಯದ ಬೆನ್ನು ಕಟ್ಟಿ ಹೊರಟ ಮಾತುಗಳನ್ನು ಮಹಿಳಾ ಸಾಹಿತ್ಯದ ಸೈದ್ಧಾಂತಿಕತೆಯ ಬೆನ್ನೆಲುಬಾಗಿ ಪರಿವರ್ತಿಸಿ ಕೊಳ್ಳುತ್ತಾರೆ.

ಶ್ಯಾಮಲಾದೇವಿ ತನ್ನ ಸಂದರ್ಭದಲ್ಲಿ ನಡೆಯುತ್ತಿದ್ದ ಭಾರತೀಯ ಕಾವ್ಯ ವಿಮರ್ಶೆಯ ದಾರಿಯನ್ನು ಹಿಡಿದು ಸಾಹಿತ್ಯ ಮತ್ತು ಸ್ತ್ರೀಯ ನಂಟನ್ನು ಆದಿಮಗೊಳಿಸಲು ಯತ್ನಿಸಿದರೆ, ಆ ಕಾಲದ ಇನ್ನೊಬ್ಬ ಪ್ರಮುಖ ಲೇಖಕಿ ಸರಸ್ವತಿಬಾಯಿ ರಾಜವಾಡೆ ಆಧುನಿಕ ಚಿಂತನಾಕ್ರಮದ ದಾರಿಯನ್ನು ಹಿಡಿದು ಸಾಹಿತ್ಯಕ್ಕಿರುವ ಸ್ತ್ರೀಯಾತ್ಮಕತೆಯನ್ನು ಪ್ರತಿಪಾದಿಸಲು ಯತ್ನಿಸುತ್ತಾರೆ.

'ಕೇವಲ ಪುರುಷ ರಚಿತ ಸಾಹಿತ್ಯದಿಂದ ಸಮಾಜದ ಆತ್ಮದರ್ಶನವಾಗುವುದಿಲ್ಲ. ಮಹಿಳೆಯರೂ ಆ ಕ್ಷೇತ್ರದಲ್ಲಿ ಪರಿಶ್ರಮಿಸಬೇಕು. ಅವರ ಹೃದಯದ ಆಸೆ ಆಕಾಂಕ್ಷೆಗಳನ್ನು, ಒಲವು ನಲಿವುಗಳನ್ನು, ಬೇಕು_ಬೇಡಗಳನ್ನು ಅವರೇ ಯಥಾರ್ಥವಾಗಿ ಚಿತ್ರಿಸಬಲ್ಲರು' ಎಂದು ಸುಪ್ರಭಾತ ಪತ್ರಿಕೆಯ ಸಂಪಾದಕೀಯದಲ್ಲಿ ಬರೆಯುತ್ತಾರೆ. ಆ ಮೂಲಕ ಸ್ತ್ರೀ ಸಂವೇದನೆಯ ಸಾಹಿತ್ಯಿಕ ಅಸ್ತಿತ್ವ, ಅದನ್ನು ಹೊಂದದ ಪ್ರಧಾನ ಸಾಹಿತ್ಯದ ಕೊರತೆ, ಆ ಕೊರತೆಯನ್ನು ಸ್ತ್ರೀಯರು ಮಾತ್ರವೇ ಸಮರ್ಥವಾಗಿ ತುಂಬಬಲ್ಲರು ಎಂಬ ಮಾತುಗಳ ಮೂಲಕ ಮಹಿಳಾ ಸಾಹಿತ್ಯದ ಅಗತ್ಯವನ್ನು ಮಂಡಿಸುತ್ತಾರೆ.

ಹೀಗೆ ಆಧುನಿಕ ವಿಮರ್ಶೆಯ ಆರಂಭಿಕ ಹಂತದಲ್ಲಿಯೇ

ಲೇಖಕಿಯರು ಸಾಹಿತ್ಯ ಮತ್ತು ಮಹಿಳೆಯ ಸಂಬಂಧ ಕುರಿತಂತೆ ವ್ಯವಸ್ಥಿತ ಚಿಂತನೆಯೊಂದನ್ನು ಮಂಡಿಸಿದ್ದರಿಂದ ಹಾಗೂ ಆ ಚಿಂತನೆಯನ್ನು ಭಾರತೀಯ ಕಾವ್ಯ ಪರಂಪರೆಯ ಸಂದರ್ಭದಲ್ಲಾಗಲಿ, ಆಧುನಿಕ ಚಿಂತನೆಯ ಸಂದರ್ಭದಲ್ಲಾಗಲೀ ಅನೂರ್ಜಿತಗೊಳಿಸುವ ಸಾಧ್ಯತೆಗಳಲ್ಲಿದ್ದರಿಂದ ಸಾಹಿತ್ಯ ಚರ್ಚೆ ಅದಕ್ಕೆ ಮನ್ನಣೆ ನೀಡಲೇಬೇಕಾಗಿ ಬಂದಿತು. ಇದೆಲ್ಲದರ ಪರಿಣಾಮವಾಗಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಕನ್ನಡ ಸಾಹಿತ್ಯ ಸಮ್ಮೇಳನದಂತಹ ಪ್ರತಿಷ್ಠಿತ ವೇದಿಕೆಯಲ್ಲಿ "ಮಹಿಳಾ ಗೋಷ್ಠಿ"ಯೊಂದು ಆರಂಭಗೊಂಡಿತು. ಮಹಿಳಾ ಸಾಹಿತ್ಯ ವೆಂಬ ಪರಿಕಲ್ಪನೆ ಅಧಿಕೃತ ಧಾರೆಯಾಗಿ ಮಾನ್ಯಗೊಂಡಿತು.

ಸಾಹಿತ್ಯ ಸಮ್ಮೇಳನದಲ್ಲಿನ ಮಹಿಳಾ ಗೋಷ್ಠಿಯ ಆರಂಭವನ್ನುವುದನ್ನು ಸ್ವಲ್ಪ ಬದಲಿಸಿ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಸಾಹಿತ್ಯ ಕುರಿತಂತೆ 'ಪ್ರತ್ಯೇಕ' ಗೋಷ್ಠಿಯೊಂದನ್ನು ಆರಂಭಿಸಲಾಯಿತು ಎನ್ನುವುದಾದರೆ ಅದು ಇನ್ನೊಂದು ದಿಕ್ಕಿನ ಚರ್ಚೆಗೆ ಅವಕಾಶ ಮಾಡಿಕೊಡುತ್ತದೆ. ಆ ಚರ್ಚೆಗೆ ಪೂರ್ವದಲ್ಲಿ ಮಹಿಳಾ ಗೋಷ್ಠಿಯ ಅಧ್ಯಕ್ಷ ಭಾಷಣವೊಂದನ್ನು ಗಮನಿಸಿ ಮುಂದುವರಿಯಬಹುದಾಗಿದೆ.

'ಸಾಹಿತ್ಯವು ಜೀವನವನ್ನು ಪ್ರತಿಬಿಂಬಿಸುವುದಲ್ಲದೆ, ಅದಕ್ಕೆ ಸರಿಯಾದ ಹಾದಿ ತೋರಿಸುವುದೂ ಒಂದು ಅದರ ಕೆಲಸ. ಸಾಹಿತ್ಯದ ಈ ದ್ವಿವಿಧ ಉದ್ದೇಶವು ಮಹಿಳೆಯರ ಸಹಕಾರ ವಿಲ್ಲದೆ ಪೂರ್ಣವಾಗದು. ಸ್ತ್ರೀಯು ಸಮಾಜದ ಅರ್ಧಾಂಗ. ಅವಳು ಜೀವನವನ್ನು ಯಾವ ವಿಧದಲ್ಲಿ ನೋಡುವಳು? ಅವಳ ಆಸೆ-ಆಕಾಂಕ್ಷೆಗಳಿಂದ ಜೀವನವನ್ನು ಹೇಗೆ ಕಟ್ಟಬೇಕು-ಮಾರ್ಪಡಿಸಬೇಕೆಂದು ಅವಳು ಬಯಸುವಳು? ಇದಕ್ಕೆಲ್ಲ ಉತ್ತರ ಬೇಕಿದ್ದರೆ ಸಾಹಿತ್ಯ ನಿರ್ಮಾಣಕ್ಕೆ ಸ್ತ್ರೀಯು ಕೈಗೊಡಲೇ ಬೇಕು. ಪುರುಷರು ಸ್ತ್ರೀ ದೃಷ್ಟಿಯಿಂದ ಸಮಾಜವನ್ನು ನೋಡುವುದು ಸಾಧ್ಯವೇ ಇಲ್ಲ. ಅಂತೆಯೇ ಸ್ತ್ರೀಯರಿಗೆ ಬೇಕಾದ ಪಾಕಶಾಸ್ತ್ರ, ಗೃಹವೈದ್ಯ, ಶಿಶುಶಿಕ್ಷಣ, ಸಂಗೀತ, ಉಪವನ ರಚನೆ, ಗೃಹ ಮಂಡನ ಮೊದಲಾದ ವಿಷಯಗಳನ್ನು ಚರ್ಚಿಸುವ ಸಾಹಿತ್ಯ ನಮ್ಮಲ್ಲಿ ಹುಟ್ಟಲೇ ಇಲ್ಲ. ಈ ಕೊರತೆಯನ್ನು ನಾವೇ ತುಂಬಬೇಕು' (ಧಾರವಾಡದಲ್ಲಿ ನಡೆದ 25ನೇ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿ ಅಧ್ಯಕ್ಷರಾಗಿದ್ದ ಸಾವಿತ್ರಿಬಾಯಿ ನಹನಗೌಡ ಅವರ ಭಾಷಣ).

ಮೇಲಿನ ಅಧ್ಯಕ್ಷೀಯ ಭಾಷಣದ ಒಂದು ಪ್ಯಾರ ಅತ್ಯಂತ ಸಮರ್ಥವಾಗಿ ಮಹಿಳಾ ಸಾಹಿತ್ಯ ಪರಿಕಲ್ಪನೆಯು ಬೆಳೆದು ಬಂದ ಬಗೆಯನ್ನು ಸೂಚಿಸಿಬಿಡುತ್ತವೆ. ಆರಂಭದಲ್ಲಿನ ಸಮಾಜದ, ಸಾಹಿತ್ಯದ ಪರಿಪೂರ್ಣತೆಯ ಮಾತು, ಅದರಲ್ಲಿನ ಸ್ತ್ರೀಯ ಸಹಕಾರದ ಉದ್ದೇಶ, ಅವರಿಗೆ ದೊರಕಬೇಕಾದ ಸಮಪಾಲು ಇತ್ಯಾದಿಗಳೆಲ್ಲವು ಅಂತ್ಯಕ್ಕೆ ಬರುವ ಹೊತ್ತಿಗೆ ಸೀಮಿತ ಗೊಂಡು' ಬಿಡುತ್ತವೆ. ಸ್ತ್ರೀಯ ಜೀವನದ ಆಸೆ ಆಕಾಂಕ್ಷೆಗಳೇನು? ಸಮಾಜವನ್ನು ಕುರಿತ ಅವಳ ನಿರೀಕ್ಷೆಗಳೇನು ಇತ್ಯಾದಿ ದೊಡ್ಡ ದೊಡ್ಡ ಪ್ರಶ್ನೆಗಳೆಲ್ಲವು ಪಾಕಶಾಸ್ತ್ರ, ಗೃಹವೈದ್ಯ, ಶಿಶುಶಿಕ್ಷಣ ಇತ್ಯಾದಿಯಲ್ಲಿ ಪರ್ಯಾವಸಾನಗೊಳ್ಳುತ್ತದೆ. ಕೊನೆಗೆ ಈ ಚರ್ಚೆ ಸ್ತ್ರೀ ಸಾಹಿತ್ಯ ರಚನೆಯ ಪರಿಶ್ರಮವೆಂಬುದು ಸಾಹಿತ್ಯಕ್ಕಿರುವ ಕೊರತೆಯನ್ನು ತುಂಬುವುದಕ್ಕಾಗಿ ಏನೋ ಎಂಬಲ್ಲಿಗೆ ಹೋಗಿ ನಿಲ್ಲುತ್ತದೆ. ಆ ಉತ್ಸಾಹದಲ್ಲಿ ತಮ್ಮ ಸಾಹಿತ್ಯಿಕ ಕೊರತೆಗಳು, ಬದುಕಿನ ಕೊರತೆಗಳು ಎಲ್ಲೋ ಒಂದೆಡೆ ಕಲೆತು ತನ್ನ ಚಿಂತನಾ ಕೊರತೆಯನ್ನು ರೂಪಿಸಿವೆ ಎಂಬುದನ್ನು ಗುರುತಿಸಿ ಕೊಳ್ಳಲಾರದಾಗಿದ್ದಾರೆ. ಅತ್ಯಂತ ಆಟಾಟೋಪದಿಂದ ವಸಾಹತುಶಾಹಿ ಸಮಾಜದ ಆಶಯವನ್ನೇ ಶಿರಸಾವಹಿಸಿ ಪ್ರತಿಪಾದಿಸಿದ್ದಾರೆ. ಆ ಚಿಂತನೆಯ ನೆರಳಿನಿಂದ ಆಚೆ ಸರಿದು ಮಹಿಳೆಯನ್ನಾಗಲಿ, ಅವಳ ವಸ್ತು ಪ್ರಪಂಚವನ್ನಾಗಲಿ, ಸಂವೇದನೆಯನ್ನಾಗಲಿ ಗುರುತಿಸಿಕೊಳ್ಳುವುದನ್ನು ಬಿಟ್ಟುಕೊಟ್ಟಿದ್ದಾರೆ. ಸ್ತ್ರೀಯ ವಸ್ತು ಪ್ರಪಂಚ, ಸಾಹಿತ್ಯ ಸಂವೇದನೆ "ಗೃಹ ಕೇಂದ್ರಿತ"ವಾದುದೇ ಎಂಬುದನ್ನು ಒಪ್ಪಿಕೊಳ್ಳುತ್ತಾರೆ. ಕೊನೆಗೆ ಪುರುಷನಿಗಿಂತ ಪ್ರತ್ಯೇಕವಾದ ವಸ್ತು ಪ್ರಪಂಚ, ಅದು ರೂಪಿಸಿದ ಪ್ರತ್ಯೇಕ ಸಂವೇದನೆ, ಆ ಸಂವೇದನೆ ಸೃಷ್ಟಿಸುವ ಪ್ರತ್ಯೇಕ ಸಾಹಿತ್ಯ ಆ ಸಾಹಿತ್ಯ ಚರ್ಚೆಗೆ ಬೇಕಾದ ಪ್ರತ್ಯೇಕ ಗೋಷ್ಠಿ ಎಂಬುದು ಸ್ತ್ರೀಗಿರುವ ಸಾಹಿತ್ಯ ರಚನೆಯ ಜನ್ಮದಾತ ಹಕ್ಕನ್ನು ಪ್ರತ್ಯೇಕವಾಗಿಯೇ ಇಡುತ್ತದೆ. ಕೊನೆಗೆ ಜನಪದ ಸಾಹಿತ್ಯಕ್ಕೆ ಅಳಿಯುತ್ತ ಬಂದ ಅಸ್ಪೃಶ್ಯತೆಯ ಶಾಪ ಮಹಿಳಾ ಸಾಹಿತ್ಯಕ್ಕೆ ಉಳಿಯುತ್ತಲೇ ಹೋಗುತ್ತದೆ.

ಹೀಗೆ ಬದುಕಿನ ಸಂದರ್ಭದಲ್ಲಿ ವಸಾಹತುಶಾಹಿ ಚಿಂತನೆಯು ನೀಡಿದ ಸ್ತ್ರೀತ್ವದ ಮಾದರಿಯನ್ನು ಸ್ವೀಕರಿಸುತ್ತಲೇ ಮಹಿಳಾ ಸಾಹಿತ್ಯಕ್ಕೊಂದು ವಿಭಿನ್ನ ಅಸ್ತಿತ್ವಕ್ಕಾಗಿ ಒತ್ತಾಯಿಸಿದ್ದರಿಂದ ಸಹಜವಾಗಿಯೇ ಅದು ಒಳಗಿಂದೊಳಗೇ ಮಹಿಳಾ ಸಾಹಿತ್ಯವನ್ನು, ಅದರ ಸಾಹಿತ್ಯಿಕ ರಾಜಕಾರಣವನ್ನು ಟೊಳ್ಳಾಗಿಸ ತೊಡಗಿತು. ಯಾವ ವಿಚಾರಗಳನ್ನು ಮಹಿಳಾ ಸಾಹಿತ್ಯದ ವೈಶಿಷ್ಟ್ಯಗಳೆಂದು, ಯಾವುದನ್ನು ಪ್ರಧಾನ ಸಾಹಿತ್ಯದ ಕೊರತೆ ಎಂದು ಗುರುತಿಸಿಕೊಂಡು ತುಂಬುವ ಪ್ರಯತ್ನಕ್ಕೆ ತೊಡಗಿದ್ದರೋ, ಆ ಅಂಶಗಳನ್ನೇ

ಮುಂದೊಡ್ಡಿ ಕನ್ನಡ ವಿಮರ್ಶೆಯು ಅದನ್ನು 'ಅಡಿಗೆ ಮನೆ ಸಾಹಿತ್ಯ'ವೆಂದು ಹಣೆಪಟ್ಟಿ ಕಟ್ಟಿತು. ವಸ್ತುವಿನ ಪರಿಮಿತಿ, ಅನುಭವದ ಕೊರತೆಗಳನ್ನು ಮಹಿಳಾ ಸಾಹಿತ್ಯದ ದುರ್ಬಲ ಸಂಗತಿಗಳಾಗಿ ಪ್ರತಿಪಾದಿಸಿತು.

ಸ್ವತಃ ಲೇಖಕಿಯರು ಯಾವ ಸೈದ್ಧಾಂತಿಕತೆಯನ್ನು ನಂಬಿ ಕತೆ ಹೇಳುವ ಕ್ರಿಯೆಗೆ ತೊಡಗಿದರೋ ಅವರು ಅದೇ ಸೈದ್ಧಾಂತಿಕತೆಯನ್ನು ನಂಬಿ ತಮ್ಮನ್ನು ತಾವು ಸಮರ್ಥಿಸಿ ಕೊಳ್ಳುವ ವಿಮರ್ಶೆಯನ್ನು ಕೈಬಿಟ್ಟರು. ಸಮಾಜವು ಆರೋಪಿಸಿದ್ದ ಸಹನೆ, ಮೃದುತ್ವ, ಲಾಲಿತ್ಯ, ಸೃಜನಶೀಲತೆ ಇತ್ಯಾದಿಗಳು ಹೆಣ್ಣಿನ ಸಹಜ ಸ್ವಭಾವಗಳೆಂದೂ, ತಾಯ್ತನ, ಕುಟುಂಬ, ಪಾಕಶಾಸ್ತ್ರ, ಗೃಹಚರ್ಯೆ ಇತ್ಯಾದಿಗಳೇ ಅವಳ ಆಯ್ಕೆಯ ಕ್ಷೇತ್ರಗಳೆಂಬುದನ್ನು ಮುಗ್ಧವಾಗಿ ಒಪ್ಪುವ ಮೂಲಕ ಅದಕ್ಕೆ ಭಿನ್ನವಾದ ಸ್ವಭಾವಗಳನ್ನು ಕಾರ್ಯಕ್ಷೇತ್ರಗಳನ್ನು ಕಾಠಿಣ್ಯದ ಪಾಂಡಿತ್ಯದ ಜಗತ್ತಾಗಿ ಪರಿಭಾವಿಸಿ ಅದು ಸ್ತ್ರೀ ಸಹಜವಲ್ಲವೆಂದು ನಂಬಿದರು. ವಿಮರ್ಶೆಯನ್ನು ಅಂತಹದೇ ಒಂದು ಸ್ತ್ರೀ ಸ್ವಭಾವಕ್ಕೆ ಒಗ್ಗದ ಜಗತ್ತಾಗಿ ಪರಿಭಾವಿಸಿ ಕೈಬಿಟ್ಟರು.

'ಬರವಣಿಗೆಯ ಕಲೆಯ ಬಗ್ಗೆ ಮಾತನಾಡುವುದು ಕಷ್ಟ. ಆದರೆ ಬರೆದುಬಿಡುವುದು ಮಾತ್ರ ಸುಲಭ. ಗಂಡಸರಿಗಿಂತ ಹೆಣ್ಣುಮಕ್ಕಳಿಗೆ ಅದು ಹೆಚ್ಚು ಸುಲಭ. ಬರವಣಿಗೆಯ ಬಗ್ಗೆ ಮಾತನಾಡುವ ಕೆಲಸವನ್ನು ಗಂಡಸರಿಗೆ ಬಿಟ್ಟುಕೊಳ್ಳೋಣ. ಶಾಸ್ತ್ರ ಅವರಿಗಿರಲಿ ಕಲೆ ನಮಗಿರಲಿ....ಒರಟು ತತ್ವ ವಿಚಾರಗಳನ್ನು ಗಂಡಸರು ಹೇಳುತ್ತ ಕೂಡಲಿ, ನಾವು ನಮ್ಮ ಮಧುರ ವಿನಯದಿಂದ ಮುಗುಳು ನಗೆಯಿಂದ, ಹಿತಮಿತ ವಚನಗಳಿಂದ ಅನುಭವದ ಮಾತುಗಳಿಂದ ಮನಗಾಣಿಸಿ ಬಿಡೋಣ.' (ಬೆಳಗಾವಿ ಜಿಲ್ಲೆ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿ ಅಧ್ಯಕ್ಷ ಭಾಷಣ; ಭಾಷಣಕಾರ್ತಿ - ಶ್ಯಾಮಲಾದೇವಿ)

ಸಾಹಿತ್ಯ ಮತ್ತು ವಿಮರ್ಶೆಗಳ ಬಗ್ಗೆ ಅಂದಿನ ಲೇಖಕಿಯರು ಇಂತಹ ಕಲ್ಪಿತಾರ್ಥಗಳನ್ನು ಅವಲಂಬಿಸಿದ್ದರಿಂದಾಗಿ ಒಂದೆಡೆ ಅವರು ಉತ್ಸಾಹದಿಂದ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುವಂತಾದರೂ ಇನ್ನೊಂದೆಡೆ ಹುಂಬತನದಿಂದ ವಿಮರ್ಶೆ ರಾಜಕಾರಣದಿಂದ ಅವರನ್ನು ವಿಮುಖವಾಗಿಸಿತು. ಸಾಹಿತ್ಯವೆಂಬುದೊಂದು ಸೃಜನಶೀಲ ಕಲೆಯಾಗಿರುವುದಷ್ಟೇ ಅಲ್ಲದೆ ಅದೊಂದು ಅಧ್ಯಯನ ಸಾಂಸ್ಕೃತಿಕ ರಾಜಕಾರಣವೂ ಆಗಿರುತ್ತದೆಂಬ ವಿಚಾರದಿಂದ ಎರವಾಗಿಸಿತು. ಪರಿಣಾಮವಾಗಿ ಸುಮಾರು 3-4 ದಶಕಗಳು ಮಹಿಳಾ ಸಾಹಿತ್ಯ ಸಾಕಷ್ಟು ಪ್ರಮಾಣವನ್ನು ಬೆಳೆದರು ಅದು ಕನ್ನಡ ವಿಮರ್ಶೆಯ ಕಾಲ ಕಸವಾಯಿತು. ಮಹಿಳೆಯರ ಆತ್ಮವಿಶ್ವಾಸಕ್ಕಾಗಿ ನಿರ್ವಚಿತ ಗೊಂಡ 'ಮಹಿಳಾ ಸಾಹಿತ್ಯ' ಎಂಬ ಪರಿಕಲ್ಪನೆ ಕೊನೆಗೆ ಎರಡನೆ ದರ್ಜೆ ಸಾಹಿತ್ಯವೆಂಬ ನಿರ್ಲಕ್ಷ್ಯಕ್ಕೆ ಒಳಗಾಗಿ ಲೇಖಕಿಯರ ಆತ್ಮವಿಶ್ವಾಸವನ್ನು ಕಸಿಯುವ ಸಂಗತಿಯಾಗಿ ಪರಿವರ್ತಿತವಾಯಿತು. ಇದು ಈಹೊತ್ತಿಗೂ ಕೆಲವು ಸಮರ್ಥರೆನಿಸಿಕೊಂಡ ಲೇಖಕಿಯರಿಗೆ ತಮ್ಮ ಸಾಹಿತ್ಯಕ್ಕೆ ಮಹಿಳಾ ಸಾಹಿತ್ಯವೆಂಬ ಹಣೆಪಟ್ಟಿ ಬೇಡ ಎಂದು ದುಮ್ಮಾನಿಸುವ ಪರಿಸ್ಥಿತಿ ಏರ್ಪಡಿಸಿತು. ಆ ಎಲ್ಲ ದುಃಖ ದುಮ್ಮಾನವನ್ನು ಮೀರಿ ಲಿಂಗಾಭೇದಾಧಾರಿತ ವಿಭಜನಾಕ್ರಮ ಬೇಕೆ ಎಂಬ ಪ್ರಶ್ನೆಯನ್ನು ಜೀವಂತವಾಗುಳಿಸಿಕೊಂಡೇ ಮಹಿಳಾ ಸಾಹಿತ್ಯ ಹಾಗೂ ಮಹಿಳಾ ಸಾಹಿತ್ಯ ಪರಿಕಲ್ಪನೆಗಳೆರಡು ನಿರಂತರವಾಗಿ ಬೆಳೆಯುತ್ತಲೇ ಇದೆ. ಏಕೆಂದರೆ ಅಧ್ಯಯನದ ಅನುಕೂಲಕ್ಕಾಗಿ ರೂಪಿಸುತ್ತೇವೆನ್ನುವ ವಿಭಜನಾ ಕ್ರಮಗಳು ವಾಸ್ತವವಾಗಿ ಓದಿನ ಕ್ರಮವನ್ನು ಒತ್ತಾಯಿಸುವ ಕೆಲಸವನ್ನು ಮಾಡುತ್ತಿರುತ್ತವೆ. ಇಂತಹ ಒತ್ತಡವನ್ನು ಲಿಂಗಾಧಾರಿತ ವಿಭಜನಾ ಕ್ರಮವು ನೆರವೇರಿಸುತ್ತಿದೆ. ಈ ಒತ್ತಡದ ಸ್ವರೂಪವೇನು ಎಂಬುದರ ವಿಶ್ಲೇಷಣೆಗೆ ತೊಡಗುವುದಾದರೆ ಆಗ ಮಾತ್ರ ಅವರ ಬೇಕು ಬೇಡದ ಚರ್ಚೆ ಹೊಸ ದಿಕ್ಕಿನಲ್ಲಿ ಹೊರಳಲು ಸಾಧ್ಯ. ಆ ಪ್ರಯತ್ನಕ್ಕೆ ಪೂರಕವಾದ ಅಂಶವಾಗಿ ಈ ಚರ್ಚೆಯನ್ನು ದಾಖಲಿಸಲಾಗಿದೆ.

*ಬಾಲ್ಯ ವೇಶ್ಯಾವಾಟಿಕೆಯಲ್ಲಿ ಫಿಲಿಪೈನ್ಸ್ ನಂತರ ಎರಡನೇ ಸ್ಥಾನ ಭಾರತಕ್ಕಿದೆಯೆಂದು ಬಾಲ್ಯ ವೇಶ್ಯಾವಾಟಿಕೆಯ ಕೇಂದ್ರ ಸಲಹಾ ಸಮಿತಿ ವರದಿ ತಿಳಿಸುತ್ತದೆ. ಈ ವರದಿಯ ಪ್ರಕಾರ ಮುಂಬೈ, ದೆಹಲಿ, ಚೆನ್ನೈ, ಕಲ್ಕೊತ್ತಾ, ಹೈದರಾಬಾದ್ ಹಾಗೂ ಬೆಂಗಳೂರಿನಂತಹ ಮಹಾ ನಗರಗಳಲ್ಲಿ ನಡೆಯುವ ವೇಶ್ಯಾವಾಟಿಕೆಯಲ್ಲಿ ಶೇ. 30 ರಷ್ಟು ಬಾಲೆಯರು ಶೋಷಣೆಗೆ ಒಳಗಾಗುತ್ತಾರೆ. ಹೆಚ್ಚಿನವರು 18 ವರ್ಷಗಳಿಗಿಂತ ಕೆಳಗಿನವರು.*

# 'ಸಮಯ' ಇಲ್ಲ ಎನ್ನುವುದು ಮಹಿಳೆಯರ ವೈಯಕ್ತಿಕ ಸಮಸ್ಯೆಯೇ?

ನಮ್ಮದೇ ಆದ ಒಂದು ಘಂಟೆ ಎಂಬುದು ಸ್ತ್ರೀಯರಿಗೆ, ವಿಶೇಷವಾಗಿ ತಾಯಂದಿರಿಗೆ ಇರುವುದೇ ಇಲ್ಲ. ಅವರು ಯಾವಾಗಲೂ ಬ್ಯುಸಿಯಾಗಿರುತ್ತಾರೆ. ಒಂದು ದಿನದಲ್ಲಿ ಮಾಡಬೇಕಾದ ಕೆಲಸವೆಲ್ಲವನ್ನೂ ಮುಗಿಸಲು ಒದ್ದಾಡುತ್ತಿರುತ್ತಾರೆ. ಯಾವಾಗಲೂ ಓಡುವವರಂತೆ-ಅವಸರವಸರವಾಗಿ ಕೆಲಸ ಮಾಡುತ್ತಿರುತ್ತಾರೆ. ಅವರಿಗೆ ಅವರ ಸಮಯ ಎಂಬುದು ಒಂದು ಕಳೆದು ಹೋದ ನೆನಪು ಅಷ್ಟೇ. 'ದಿನವಿಡೀ ನಾನೇನು ಮಾಡುತ್ತೇನೋ ಗೊತ್ತಿಲ್ಲ, ಆದರೆ ನನಗೆ ಸಮಯ ಎಂಬುದೇ ಇಲ್ಲ,' ಎಂದು ಸ್ತ್ರೀಯರು ಹೇಳುವುದನ್ನು ನಾವು ಕೇಳುತ್ತಲೇ ಇರುತ್ತೇವೆ. ಈಗಿನ ಸಾಮಾಜಿಕ ವ್ಯವಸ್ಥೆಯಲ್ಲಿ ಯಾರಿಗೂ ಸಮಯವಿಲ್ಲ. ಈಗ ತಾಯಂದಿರ ಮೇಲೆ ಹೊರೆ ಇನ್ನಷ್ಟು ಹೆಚ್ಚಾಗಿದೆ. ಮೂರೂ ಹೊತ್ತು ದುಡಿಯುವ, ಸಮಯವೇ ಇರದ ಈ ಮಹಿಳೆಯರು ಅಸ್ಪೃಶ್ಯರು ಹಾಗೂ ಧ್ವನಿ ಇಲ್ಲದವರು. ಹೊರಗಡೆ ನಾವು ದುಡಿಯುವ ಕೆಲಸ ಎಷ್ಟು ಸಮಯದ್ದು ಎಂದು ನಾವೆಲ್ಲರೂ ಬಲ್ಲೆವು. ಆದರೆ ನಮ್ಮ ಬದುಕಿನ ನಿರ್ವಹಣೆಗಾಗಿ ಮನೆಯಲ್ಲಿ ಎಷ್ಟು ಹೊತ್ತು ದುಡಿಯುವೆವು ಎಂಬುದು ನಮಗೇ ಗೊತ್ತಿಲ್ಲ. ಈ ಶ್ರಮಕ್ಕೆ ಹೆಚ್ಚು ವೇಳೆ ಹಿಡಿಯುತ್ತದೆ. ಆದರೆ ಇದು ಶ್ರಮ ಎಂದು ನಾವು ಒಪ್ಪಿಕೊಳ್ಳುವುದೇ ಇಲ್ಲ. ಸಾಂಪ್ರದಾಯಿಕವಾಗಿ ಹೆಂಗಸರಿಂದಲೇ ನಡೆದುಕೊಂಡು ಬಂದ ಮನೆಗೆಲಸ ಯಾವತ್ತು ಮೌಲ್ಯಯುತವಾಗಿಲ್ಲ. ಪ್ರಶಂಸೆ ಪಡೆಯುವುದಿಲ್ಲ. ಅಥವಾ ಕೆಲಸ ಎಂದೇ ಕರೆಸಿಕೊಳ್ಳುವುದಿಲ್ಲ. ಆದರೂ ಇದು ದಿನದ ಅನೇಕ ಘಂಟೆಗಳನ್ನು ತೆಗೆದುಕೊಳ್ಳುತ್ತದೆ.

ವಾರದ ಅನೇಕ ಘಂಟೆಗಳನ್ನು ಬಟ್ಟೆ ಒಗೆಯುವುದಕ್ಕೆ, ಸಾಮಾನು ಹೊಂದಿಸುವುದಕ್ಕೆ, ಮನೆ ಸ್ವಚ್ಛವಾಗಿ ಇಡುವುದಕ್ಕೆ, ಆಹಾರದ ವಸ್ತುಗಳನ್ನು ಖರೀದಿಸುವುದಕ್ಕೆ, ಬಟ್ಟೆ ಹೊಂದಿಸುವುದಕ್ಕೆ, ಅಡಿಗೆಗೆ, ರಿಪೇರಿಗೆ, ಮಕ್ಕಳನ್ನು ಸಾಕುವುದಕ್ಕೆ, ಬೇರೆಯವರ ಸಾಮಾಜಿಕ ಸಂಬಂಧಗಳನ್ನು ಹೊಂದಿಸುವುದಕ್ಕೆ, ಕುಟುಂಬದ ಆರೋಗ್ಯಕ್ಕೆ ಎಂದು ಕಳೆಯುತ್ತಿರುತ್ತೇವೆ. ಬದುಕನ್ನು ನಿರ್ವಹಿಸುವುದಾದಲ್ಲಿ ಇದೆಲ್ಲವನ್ನೂ ಮಾಡಲೇಬೇಕಾಗುತ್ತದೆ. ಬಾರ್ಬರಾ ಬುಷ್ ಒಮ್ಮೆ ಕೇಳಿದ್ದರು - "ದುಡಿಯುವ ಮಹಿಳೆಯರು ಮಕ್ಕಳೊಂದಿಗೆ ಕಳೆಯಲು ತಮಗೆ ಸಮಯವೇ ಇಲ್ಲವೆನ್ನುತ್ತಾರೆ. ಅವರು 8 ಘಂಟೆ ಹೊರಗೆ ಕೆಲಸ ಮಾಡುತ್ತಾರೆ. ಇನ್ನೂ 8 ಘಂಟೆ ಅವರಿಗೆ ಉಳಿದಿರುತ್ತದೆ. ಅವರು ಏನು ಮಾಡುತ್ತಾರೆ?" ಮನೆಗೆಲಸದ ಹೊರೆಯನ್ನು ಬಾರ್ಬರಾ ಬುಷ್ ಗಮನಿಸದೇ ಇರುವುದು ವಿಪರ್ಯಾಸ.

ಅಂದರೆ ಮಹಿಳೆಯರು ಯಾಕೆ ಯಾವಾಗಲೂ ದುಗುಡ ದಿಂದ ಕೂಡಿರುತ್ತಾರೆ? ಸಮಯ ಇಲ್ಲ ಎಂದು ಹೇಳುವ ಅವರ ಫಿರ್ಯಾದು ಕಾರಣವಿಲ್ಲದ್ದೇ?

'ಇಡೀ ದಿನ ಅವರೇನು ಮಾಡುತ್ತಾರೆ?'

ಇದು ಮನೆಯಲ್ಲಿರುವ ಮಹಿಳೆಯರ ಬಗ್ಗೆ ಸಾಮಾನ್ಯವಾದ ಪ್ರತಿಕ್ರಿಯೆ. 'ದಿನವಿಡೀ ನಾನೇನು ಮಾಡುತ್ತೇನೆಂದು ನನಗೇ ತಿಳಿಯದು' ಎನ್ನುವ ಹೆಂಗಸರು ತಾವೇನು ಮಾಡುತ್ತೇವೆ ಎಂಬುದನ್ನು ತಿಳಿಯದೇ ದಿನವಿಡೀ ಕೆಲಸ ಮಾಡುತ್ತಲ್ಲೇ ಇರುತ್ತಾರೆ.

ಸಾಂಪ್ರದಾಯಿಕವಾಗಿರುವ ಈ ಕೆಲಸಕ್ಕೆ ಕೆಲಸ ಎಂದು ಗುರುತಿಸುವ ಸಾಂಸ್ಕೃತಿಕ ವಾತಾವರಣ ನಮ್ಮಲ್ಲಿ ಇಲ್ಲವೇ ಇಲ್ಲ,

ಡಾಕ್ಟರ್ ಇಡೀ ದಿನ ಕೆಲಸ ಮಾಡಿದರೆ ಆಕೆಯನ್ನು ಕರುಣೆಯಿಂದ ನೋಡುವವರೇ ಹೆಚ್ಚು. ಯಾರೂ ಡಾಕ್ಟರನ್ನು 'ಇಡೀ ದಿನ ನೀವೇನು ಮಾಡಿದಿರಿ' ಎಂದು ಕೇಳುವುದಿಲ್ಲ. ಹಾಗೆ ಕೇಳುವುದು ಹಾಸ್ಯಾಸ್ಪದವಾಗುತ್ತದೆ. ಕೆಲವು ರೋಗಿಗಳನ್ನು ನೋಡಲು ಡಾಕ್ಟರ್‌ಗೆ ಸಾಧ್ಯವಾಗದಿದ್ದರೆ ಯಾರೂ ಈ ಬಗ್ಗೆ ಏನೂ ಮಾತನಾಡುವುದಿಲ್ಲ. ಆದರೆ ಒಬ್ಬ ತಾಯಿ, ಅಥವಾ ಹೆಂಗಸು ಮನೆಯಲ್ಲಿ ಎಲ್ಲವನ್ನೂ ಮಾಡಿ ಮುಗಿಸಿರದಿದ್ದರೆ ಆಕೆ ಸೋಮಾರಿಯಾಗುತ್ತಾಳೆ. ಚಟುವಟಿಕೆ ಇಲ್ಲದವ ಳಾಗುತ್ತಾಳೆ. ಸಾಂಪ್ರದಾಯಿಕವಾಗಿ ಬಂದ ಸ್ತ್ರೀಯರ ಕೆಲಸ ಎಂದು ಕರೆಯಲ್ಪಡುವ ಮನೆಗೆಲಸಕ್ಕೆ ನ್ಯಾಯಬದ್ಧತೆ ಒದಗಿಯೇ ಇಲ್ಲ. ಜೀವನಕ್ಕೆ ಅತ್ಯಂತ ಅಗತ್ಯವಾದ ಮನೆಗೆಲಸಕ್ಕೆ ಒಂದು ಅಸ್ತಿತ್ವ ಇಲ್ಲದಿರುವುದು ವಿಡಂಬನೆಯೇ ಸರಿ. ಮೊದಲೇ ಹೇಳಿದಂತೆ ಮಕ್ಕಳನ್ನು ನೋಡಿಕೊಳ್ಳುವ ಹೊರೆ ತಾಯಂದಿರ ಮೇಲೆ ಇತ್ತೀಚೆಗೆ ಹೆಚ್ಚಾಗಿ ಬೀಳತೊಡಗಿದೆ. ಕಳೆದ ದಿನಗಳಿಗಿಂತ ಹೆಚ್ಚು ಸಮಯವನ್ನು ಮಕ್ಕಳಿಗಾಗಿ ತಾಯಂದಿರು ಮೀಸಲಿಡ ಬೇಕಾಗಿದೆ. ಅವರನ್ನು ಆಟ ಹಾಗೂ ಇತರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಅವರು ನೋಡಿಕೊಳ್ಳಬೇಕಾಗಿದೆ. ಅವರ ಭಾವನೆಗಳನ್ನು ಅರ್ಥಮಾಡಿ ಕೊಳ್ಳಲು ಸಮಯವನ್ನು ಮೀಸಲಾಗಿಡಬೇಕಾಗಿದೆ. ಅವರ ಶಾಲೆಯ ಚಟುವಟಿಕೆಗಳಲ್ಲಿ ಹೆಚ್ಚು ಹೆಚ್ಚು

ನೆರವಾಗಬೇಕಾಗಿದೆ. ಮಕ್ಕಳ 'ಪೇರೆಂಟ್ಸ್' ಸಭೆಗಳಿಗೆ ತಾಯಂದಿರೇ ಹೋಗುವುದು, ಹೋಗದಿದ್ದರೆ ಶಾಲೆಯ ಮುಖ್ಯೋಪಾಧ್ಯಾಯಿನಿಯಿಂದ ತಂದೆ-ತಾಯಿಗೆ ಹುಕುಂ ಬರುತ್ತದೆ. ತಂದೆ ಹೊರಗೆ ಹೋಗಿ ದುಡಿಯುವವನಾದ್ದರಿಂದ ತಾಯಿ ಆ ಹುಕುಂನ್ನು ಸ್ವೀಕರಿಸ ಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಮಕ್ಕಳಿಗೆ ನಿರಾಸೆ ಯಾಗುತ್ತದೆ, ಶಿಕ್ಷೆಯಾಗುತ್ತದೆ.

'ಸಮಯ' ಎಂಬುದು ತಾಯಂದಿರ ವೈಯಕ್ತಿಕ ಸಮಸ್ಯೆಯೇ?

ಸಮಯವಿಲ್ಲವೆನ್ನುವ ಮಹಿಳೆಯರು ತಾವೇ ಸರಿ ಇಲ್ಲವೇನೋ ಎಂದು ಕೊಳ್ಳುತ್ತಾರೆ. ಹೆಚ್ಚು ಜವಾಬ್ದಾರಿಯಿಂದ ಇರಬೇಕು ಎನ್ನುತ್ತಾ ಬೆಳಿಗ್ಗೆ ಬೇಗ ಏಳುತ್ತಾರೆ - ತಮ್ಮದೇ ಎಲ್ಲೋ ತಪ್ಪಿರಬೇಕು ಎಂದುಕೊಳ್ಳುತ್ತಾರೆ. ಸಮಯವನ್ನು ಪೇಪರ್ ಓದುವುದು, ಮ್ಯಾಗ್‌ಜೈನ್ ಓದುವುದರಲ್ಲಿ ಕಳೆಯಬಾರದು ಎಂದುಕೊಳ್ಳುತ್ತಾರೆ. ಪಕ್ಕದ ಮನೆಯವರ ಹತ್ತಿರ ಕುರಿತು ಮಾತನಾಡಬಾರದು ಎಂದುಕೊಳ್ಳುತ್ತಾರೆ.

ಇದು ಅವರ ವೈಯಕ್ತಿಕ ಸಮಸ್ಯೆಯೇ?

ಇದು ಮಹಿಳೆಯರ ವೈಯಕ್ತಿಕ ಸಮಸ್ಯೆ ಅಲ್ಲ. ಸಮಯವಿಲ್ಲ ಎಂದು ಅವರು ಸುಮ್ಮನೇ ಹೇಳುವುದಿಲ್ಲ. ಅವರ ಬದುಕನ್ನು ಅರ್ಥಪೂರ್ಣ ಮಾಡಿಕೊಳ್ಳುವುದಕ್ಕೆ ಅವರಿಗೆ ಸಮಯವೇ ಇರುವುದಿಲ್ಲ. ಸಮಯವನ್ನು ಅವರಿಗಾಗಿ ಇಟ್ಟುಕೊಂಡರೆ ಅದು ಅವರ ಸೃಜನಾತ್ಮಕತೆಗಾಗಿ ಆಗಿರುತ್ತದೆ; ಓದುವುದು ಅಥವಾ ಅವರ ಮನಸ್ಸನ್ನು ಉಲ್ಲಸಿತವಾಗಿಡುವ ಸಂದರ್ಭಕ್ಕಾಗಿ ಆಗಿರುತ್ತದೆ. ಅವರಿಗಾಗಿ ಅವರು ಸಮಯ ಕೊಟ್ಟುಕೊಳ್ಳುವುದು ಪಾಪವಲ್ಲ. ಸಾವಿರಾರು ಮಹಿಳೆಯರು ಹೇಳುವ 'ನಮಗೆ ಸಮಯವಿಲ್ಲ' ಎನ್ನುವ ವಿಚಾರದಲ್ಲಿ ಸತ್ಯವಿದೆ ಎಂಬುದನ್ನು ನಾವು ತಿಳಿಯಬೇಕಾಗಿದೆ.

ಸಮಯದ ಅಭಾವದಿಂದಾಗಿ ಮಹಿಳೆಯರು ಬರಡು ಬದುಕಲ್ಲಿ ಜೀವನ ಸವೆಸುತ್ತಾರೆ. ಗುಣಾತ್ಮಕವಾಗಿ ಅವರ ಬದುಕು ನಶಿಸಿ ಹೋಗುತ್ತಿರುತ್ತದೆ. ಗಳಿಕೆ, ಸಮಯ, ಸ್ವಾತಂತ್ರ್ಯವನ್ನು ತ್ಯಾಗ ಮಾಡಿ ಮಕ್ಕಳಿಗಾಗಿ ಮೀಸಲಿಡುವುದನ್ನು ನಿರೀಕ್ಷಿಸ ಲಾಗುತ್ತದೆ.

ಚೆನ್ನಾಗಿ ಕೆಲಸ ಮಾಡಲು, ಒಳ್ಳೆಯ 'worker' ಎನಿಸಿ ಕೊಳ್ಳಲು ಮಕ್ಕಳನ್ನು ತ್ಯಾಗ ಮಾಡುವುದು;

ಅತ್ಯಂತ ಉತ್ತಮ ಕೆಲಸದಲ್ಲಿ ಪ್ರಶಂಸೆ ಪಡೆಯಲು ಆರೋಗ್ಯ, ಗೆಳೆತನ ಇವುಗಳನ್ನು ತ್ಯಾಗ ಮಾಡುವುದು;

ಪೂರ್ಣವಾಗಿ ನಮ್ಮ ಕೆಲಸಗಳಲ್ಲಿ ತೊಡಗಿಸಿಕೊಳ್ಳಲು ಮಕ್ಕಳನ್ನು ಹೊಂದದೇ ಇರುವ ತ್ಯಾಗ ಮಾಡುವುದು;

ಮಕ್ಕಳನ್ನು ಹೊಂದುವುದಕ್ಕಾಗಿ ಕ್ರಿಯಾತ್ಮಕ ಚಟುವಟಿಕೆ ಅಥವಾ ನಮ್ಮ ಹಾಬಿಗಳನ್ನು ತ್ಯಾಗ ಮಾಡುವುದು;

ಇವು ಮಹಿಳೆಯರಿಗಿರುವ ಆಯ್ಕೆಗಳಾಗಿರುತ್ತವೆ. ಯಾವುದೇ ವೈಯಕ್ತಿಕ ಪರಿಹಾರ ಎಲ್ಲವನ್ನೂ ಹೊಂದುವುದಕ್ಕೆ ಅವಕಾಶ ಮಾಡಿಕೊಡುವುದಿಲ್ಲ.

ಹಾಗಾಗಿ ಬದುಕು ಅವಸರದಿಂದ ಕೂಡಿರುತ್ತದೆ, ಗುಣಾತ್ಮಕವಾಗಿ ನಾಶ ಹೊಂದುತ್ತಿರುತ್ತದೆ, ಹಾಬಿಗಳಾಗಲೀ, ಆಸಕ್ತಿಗಳಾಗಲೀ, ಬರವಣಿಗೆ, ಕಲೆ, ಸಂಗೀತ ಇವು ರಾತ್ರಿ 10 ಗಂಟೆಯಿಂದ 10-45 ಘಂಟೆಗಳೊಳಗಾಗಿ ರೂಪುಗೊಳ್ಳು ವಂತಹವುಗಳಲ್ಲ. ಇವುಗಳಿಗೆ ಸೃಜನಶೀಲಾತ್ಮಕತೆ, ಚಿಂತನೆ, ಚಟುವಟಿಕೆ ಬೇಕು. ಶ್ರೇಷ್ಠ ಕಲೆ, ಸಾಹಿತ್ಯ, ಸಂಗೀತಕ್ಕೆ ನಮ್ಮ ಸೃಜನಾತ್ಮಕತೆ ಬೇಕು. ನೀವು ಬರೆಯಬೇಕೆಂದರೆ ನೀವು ಸೋಮಾರಿತನದಿಂದ ಇರಬೇಕಾಗುತ್ತದೆ. ಮಂದ ನಡಿಗೆಯವ ರಾಗಿರಬೇಕಾಗಿರುತ್ತದೆ, ನಿಮ್ಮಷ್ಟಕ್ಕೆ ನೀವೇ ಬಹಳ ಸಮಯ ಕಳೆಯುವಂತಿರಬೇಕು ಎಂದು ಬ್ರೆಂಡಾ ಹೇಳುತ್ತಾರೆ.

ಆದರೆ ಮಹಿಳೆಯರಿಗೆ ಈ ಸಮಯವೇ ಇರುವುದಿಲ್ಲ. ಬಹುಜನ ಮಹಿಳೆಯರ ಬದುಕಿನಲ್ಲಿ ಸಮಯ ಅಡಗಿ ಹೋಗಿರುತ್ತದೆ. ಸಾಮಾಜಿಕ ಬದಲಾವಣೆಗೆ ಸಮಯವೇ ಇಲ್ಲದಿರುವುದರಿಂದ ಅದೂ ಕುಂಠಿತಗೊಂಡಿರುತ್ತದೆ.

ಮಹಿಳೆಯರ ಧ್ವನಿ, ಅಗತ್ಯಗಳು ಸರ್ಕಾರದ ಸಾಮಾಜಿಕ ಯೋಜನೆಗಳಲ್ಲಿ ಪ್ರತಿಫಲನಗೊಳ್ಳುವುದಿಲ್ಲ. ಮಹಿಳೆಯರ ಬದುಕನ್ನು ಹಸನುಗೊಳಿಸಲು ಅವರಿಗೆ ಬೇಕಾದ ಅಗತ್ಯಗಳು ಮಹಿಳೆಯರಿಗೆ ಮನವರಿಕೆಯಾಗಿವೆ.

ಹೆಚ್ಚು, ಹೆಚ್ಚು ಶಿಶುಕೇಂದ್ರಗಳು, ಒಳ್ಳೆಯ ಕೆಲಸ, ಕಡಿಮೆ ಅವಧಿಯ ಲಾಭದ ಕೆಲಸ, ಒಳ್ಳೆಯ ಆರೋಗ್ಯ ಇವು ಮಹಿಳೆಯರಿಗೆ ಅಗತ್ಯವಾಗಿವೆ.

ಇವುಗಳಿಗೆ ಹೋರಾಡಲೂ ಸಹ ಅವರಿಗೆ ಸಮಯವಿಲ್ಲ. ಏಕೆಂದರೆ ದಿನವಿಡೀ ಅವರು ಓಡುವಂತೆಯೇ ಮಾಡಲಾಗಿದೆ.

ಸ್ಥಳೀಯ ಶಾಲೆಯ ಬೋರ್ಡ್‌ನಲ್ಲಿ ಸದಸ್ಯರಾಗುವು ದಕ್ಕಾಗಲೀ, ಸ್ಥಳೀಯ ಸರ್ಕಾರಕ್ಕೆ ಪೆಟಿಶನ್ ಕೊಡುವುದ ಕ್ಕಾಗಲೀ, ಕೆಲಸದ ಸ್ಥಳದಲ್ಲಿ ಒಳ್ಳೆಯ ಬದಲಾವಣೆಗೆ ಹೋರಾಡುವುದಕ್ಕಾಗಲೀ, ಉತ್ತಮ ಲೇಖನಗಳನ್ನು ಬರೆಯುವುದಕ್ಕಾಗಲೀ ಅವರಿಗೆ ಸಮಯವೇ ಇರುವುದಿಲ್ಲ.

ಎಲ್ಲದನ್ನೂ ಹೊಂದಿಸಿಕೊಳ್ಳಲು ಪ್ರಯತ್ನಿಸುವ ನಮಗೆ ನಮ್ಮ ಬದುಕನ್ನು ಮಾರಿಕೊಳ್ಳಲು ಇಷ್ಟವಿರುವುದಿಲ್ಲ. ನಮ್ಮ

ಮೌನವನ್ನು ಮುರಿಯಲು ನಾವು ಹೋರಾಡಬೇಕು. ಹೆಂಗಸರು ಕೆಲಸ ಮಾಡಬೇಕು ಎಂದು ಸಮಾಜ ಹೇಳುತ್ತದೆ. ಈಗಾಗಲೇ ಹೆಂಗಸರಿಗೆ ದುಡ್ಡಿರದ ಕೆಲಸ ಇದೆ ಎಂಬುದನ್ನು ಸಮಾಜ ಗಮನಿಸಬೇಕು. ಈ ಕೆಲಸ ಆಗಲೇಬೇಕು. ಕುಟುಂಬದಲ್ಲಿ ಮಕ್ಕಳ ಬೇಡಿಕೆಗಳು ಹೆಚ್ಚಾಗುತ್ತಿರುವುದರಿಂದ ತಾಯಂದಿರ ಜವಾಬ್ದಾರಿ ಹೆಚ್ಚಾಗತೊಡಗಿದೆ. ಇದೇ ಸಂದರ್ಭದಲ್ಲಿ ಕಾರ್ಪೊರೇಟ್ ಸೆಕ್ಟರ್‌ಗಳು ತಮ್ಮ ಉದ್ಯೋಗಿಗಳಿಂದ ಹೆಚ್ಚು ಹೆಚ್ಚು ಘಂಟೆಗಳ ಕಾಲ ಕೆಲಸವನ್ನು ಮಾಡುವುದನ್ನು ನಿರೀಕ್ಷಿಸಲಾಗುತ್ತದೆ. ಯಾವುದನ್ನೋ ಬಿಟ್ಟುಕೊಡಬೇಕಾಗುತ್ತದೆ. ಚರಿತ್ರೆಯಿಂದ ಇಲ್ಲಿಯವರೆಗೆ ಬಿಟ್ಟು ಕೊಡುವವರು ಹೆಂಗಸರೇ ಆಗಿದ್ದಾರೆ.

ಈ ಸಮಯದ ಅಭಾವ ಸಮಾಜದಿಂದ ಸೃಷ್ಟಿಯಾದುದು ಎಂಬುದನ್ನು ನಾವು ಅರಿಯಬೇಕಾಗಿದೆ. ಸಮಾಜವು ಹೆಂಗಸರ ಕೆಲಸಗಳನ್ನು ಗಮನಿಸುವುದಿಲ್ಲ. ಹಾಗಾಗಿ ಅವುಗಳನ್ನು ಮಾಡುವುದಕ್ಕೆ 'ಸಮಯ' ಒದಗಿಸುವುದಿಲ್ಲ. ಜೀವನ ಮಟ್ಟ ಹೆಚ್ಚಿಸಿಕೊಳ್ಳುವುದಕ್ಕೆ ಹೊರಗಿನ ಕೆಲಸದಲ್ಲಿ ಹೆಚ್ಚು ಹೆಚ್ಚು ಸಮಯವನ್ನು ನಿರೀಕ್ಷಿಸಲಾಗುತ್ತದೆ. ಇವೆಲ್ಲ, ಸಮಾಜ, ಸರ್ಕಾರ ಸೃಷ್ಟಿಸಿದ ಸಮಸ್ಯೆಗಳು. ಇದು ಅರ್ಥವಾದರೆ ಸಮಸ್ಯೆಯ ಪರಿಹಾರಕ್ಕೆ ನಾವು ಯೋಚಿಸಬಹುದು.

ನಾವು ಸ್ತ್ರೀಯರ ಸಾಂಪ್ರದಾಯಿಕ 'ಮನೆಗೆಲಸ'ವನ್ನು ಮರು ಮೌಲ್ಯಮಾಪನ ಮಾಡಬೇಕಾಗಿದೆ.

ಇದನ್ನು ಗಳಿಸುವ ಪ್ರಕಾರದಲ್ಲಿ ನೋಡಬೇಕಾಗಿದೆ. ಮಕ್ಕಳನ್ನು ನೋಡಿಕೊಳ್ಳುವುದು, ವಯಸ್ಸಾದವರನ್ನು ಕಾಯಿಲೆಯವರನ್ನು ನೋಡಿಕೊಳ್ಳುವುದು, ಮನೆಯನ್ನು ಸ್ವಚ್ಛ, ಸುಂದರವಾಗಿರಿಸುವುದು, ಅಡಿಗೆ ಮಾಡುವುದು ಇವೆಲ್ಲ ವೈಯಕ್ತಿಕ ಕೆಲಸಗಳಲ್ಲ, ಇವು ಸಮಾಜಕ್ಕೆ ಲಾಭ ತರುವ ಕೆಲಸಗಳು.

ಮಾನವ ಜನಾಂಗಕ್ಕೆ ಅಗತ್ಯವಿರುವ ಎಲ್ಲಾ ಕೆಲಸಗಳು ಕೇವಲ ಸಾಂಪ್ರದಾಯಿಕವಾದವುಗಳಲ್ಲ ಎಂಬುದನ್ನು ನಾವು ತಿಳಿಯಬೇಕಾಗಿದೆ. ಕೊನೆಯದಾಗಿ ಇದು ವೈಯಕ್ತಿಕ ಸಮಸ್ಯೆಯಲ್ಲ, ಸಾಮಾಜಿಕ ಅಗತ್ಯ ಎಂಬುದನ್ನು ನಾವು ಅರಿಯಬೇಕಾಗಿದೆ.

*(ಇಂಟರ್ ನೆಟ್‌ನಿಂದ)*

## ನಾದಸ್ವರ ಊದುವವ

**ಬೆ**ಳಗ್ಗೆ ಸುಮಾರು 7 ಗಂಟೆ ಸಮಯ, ಸೂರ್ಯ ಬ್ರೈಟ್ ಆಗಿ ಬಂದು ನಿಂತಿದ್ದ, ಯಥಾಪ್ರಕಾರ ಗಡಿಬಿಡಿ. ಮನೆಕೆಲಸ ತಿಂಡಿ ಮಾಡು, ರೆಡಿ ಆಗು, ಬಸ್ಸು ಹಿಡಿ ಎಲ್ಲವನ್ನೂ ಟಿ.ವಿ.ಯಲ್ಲಿ ತೋರಿಸುವ ಜಾಹೀರಾತಿನಂತೆ ನೀಟ್ ಫಿನಿಶಿಂಗ್ ಕೊಟ್ಟು ನಗುನಗುತ್ತ ಇಡೀ ದಿನ ದುಡಿಯಬೇಕು. ಛೆ, ಥೂಗಳು ಎಣಿಸಲಾರದಷ್ಟು ಬಂದುಹೋಗುತ್ತವೆ.

ನಾದಸ್ವರ ಊದುತ್ತ ಬಂದಿದ್ದ ಮನುಷ್ಯ (ಭಿಕ್ಷುಕ ಅನ್ನಬೇಕೆ!) ಮನೆ ಗೇಟಿಗೆ ಬಂದ. ಯಮನ್ ರಾಗ ಊದ ತೊಡಗಿದ. ಬೀದಿಯುದ್ದಕ್ಕೂ ಎಲ್ಲ ಮನೆಯ ಮುಂದೂ ಅದೇ ರಾಗ. (ಮುಂದಿನ ಬೀದಿಯಲ್ಲಿ ಅಭೋಗಿ ನುಡಿಸಿದ್ದು ಕೇಳಿಸುತ್ತಿತ್ತು) ಹೃದಯಕ್ಕೆ ಹಾಯೆನಿಸಿತು. ಜೋಳಿಗೆಗೆ ಹಿಡಿ ಅಕ್ಕಿ ಹಾಕಿ ಎರಡು ರೂಪಾಯಿ ಕೊಟ್ಟೆ. ಪಂಚೆ ಉಟ್ಟು, ವಿಭೂತಿ ಮೆತ್ತಿದ್ದ ಅವನನ್ನ 'ನೀವು ಯಾವ ಊರಿನವರು? ಬಸವ ಎಲ್ಲಿ' ಎಂದು ಕೇಳಿದೆ. 'ಬಸವ ಸತ್ತಹೋಯ್ತು ತಾಯಿ, ನಾವು ನೆಲಮಂಗಲದವರು. ಯಾಕೆ ಕೇಳಿದ್ರಿ ತಾಯಿ ಅಂದ. ತಕ್ಷಣ ಏನು ಹೇಳಲೂ ತೋಚದೆ 'ಸುಮ್ಮನೆ ಕೇಳಿದೆ' ಎಂದೆ. ಅವನೂ ಸುಮ್ಮನೆ ಹೀಗೇ ಒಂದು ನಿಮಿಷ ನಿಂತು ಮುಂದಿನ ಮನೆಗೆ ಹೋದ. ಅವತ್ತೆಲ್ಲ ಯಮನ್ ರಾಗದ ಗುಂಗು. ಈ ಊರಿನಲ್ಲಿ ಎಲ್ಲವೂ ಎಲ್ಲರೂ ಇಡೀ ದಿನ ಬರೀ ಟೆನ್ಷನ್ ಕೊಡುತ್ತಿದ್ದರೆ ಈತ ಕಲ್ಯಾಣಿ ತುಂಬಿಸಿ ಹೋದನಲ್ಲ, ಥ್ಯಾಂಕ್ಯೂ ಅಂದುಕೊಂಡೆ.

ಇಂಡಿಯಾ ಮುಂದುವರೆಯುತ್ತಿದೆ. ಬೆಂಗಳೂರು ತೀವ್ರ ಗತಿಯಲ್ಲಿ ಬೆಳೆಯುತ್ತಿದೆ. ಬೇರೆ ಊರುಗಳಾದ ಕಾಡುಗುಡಿ, ಕೆಂಗೇರಿ, ಕನಕಪುರ, ನೆಲಮಂಗಲ ಎಲ್ಲ ಬೆಂಗಳೂರೇ ಆಗಿಬಿಟ್ಟಿದೆ. ಅಪ್ಪ ಹೇಳುತ್ತಾರೆ - Palace Orchardsನಲ್ಲಿ ನಾವು ಹಾವುಗಳನ್ನು ನೋಡದ ದಿನವೇ ಇರಲಿಲ್ಲ; ಓಹ್ ಕೊಡಿಗೇಹಳ್ಳಿ ವೀಳ್ಯದೆಲೆ ತುಂಬ ಹೆಸರುವಾಸಿಯಾದ್ದು, ಹೀಗೇ ಆ ಕಾಲದ ಕನವರಿಕೆಗಳು. ಈಗ ಈ ಜಾಗಗಳಲ್ಲಿ ನಾವು ನಿತ್ಯವೂ ನೋಡುವುದು ಬರೇ ಟ್ರಾಫಿಕ್ ಜಾಮ್.

ಅಲ್ಲ, ನಾದಸ್ವರ ಊದುವವನ ಬಗ್ಗೆ ಯೋಚಿಸ ತೊಡಗಿದರೆ ಈ ಆಲೋಚನೆಗಳು ಎಲ್ಲೆಲ್ಲೋ. ಯಾಕೆ ಹರೀತವೆ ಅಂತ? ಸಧ್ಯ, ಖಾಸಗಿ ಯೋಚನೆಗಳಾದರೂ ಶಿಕ್ಷಣದಂತೆ ಕೋಡಿಫೈ ಆಗದಿದ್ದರೆ ಸಾಕು. ಹೀಗೇ ಯೋಚಿಸಬೇಕು ಎಂದು ರೂಲ್ಸ್ ಮಾಡಿದರೆ ಬದುಕು ಎಂಥ ಬಂಧನ! ದೇವರೇ ಕಾಪಾಡು. ಕಲ್ಯಾಣಿಯ ಕಿಕ್ ಜಾಸ್ತಿಯಾಗುತ್ತಾ ಹೋಯಿತು.

ಬೆಂಗಳೂರಿಗೆ ಬದುಕು ಹುಡುಕಿಕೊಂಡು ಬಂದ ಎಷ್ಟೋ ಹಳ್ಳಿಗರಲ್ಲಿ ಇವನೂ ಒಬ್ಬ ಇರಬೇಕು. ಜಮೀನು ಪಮೀನು ಏನಾದ್ರು ಅಲ್ಪ ಸ್ವಲ್ಪ ಇದ್ದಿದ್ರೆ ಬೆಂಗಳೂರಿನ ಯಾವುದೋ ಡೆವೆಲಪರ್‌ಗೆ ಮಾರಿರಬಹುದು. ಅವು NRIಗಳ ತೋಟದ ಮನೆಗಳಾಗಿರಬಹುದು. ತನ್ನ ಕುಟುಂಬಕ್ಕೆ ಹಿಟ್ಟಿಲ್ಲದಾಗ ಬಸವಣ್ಣನ್ನ ಹೇಗೆ ಸಾಕುತ್ತಾನೆ. ದಿನಕ್ಕೆ ಹೆಚ್ಚೆಂದರೆ ಮೂವತ್ತು ನಲವತ್ತು ರೂ. ಗಳಿಸುತ್ತಿರಬಹುದು. ಮಕ್ಕಳನ್ನ (ಗಂಡು ಮಕ್ಕಳು) ಸುಮ್ಮನೆ 'ಪೀ ಪೀ ಎಂದು ಊದಲು ಹಚ್ಚದೆ ಶಾಲೆಗೆ ಕಳುಹಿಸುತ್ತಿರಬಹುದು. ತನ್ನ ಸಂಸಾರವೂ 'ಮುಂದೆ ಬರಬೇಕು' ಎಂಬ ಆಸೆ ಇರುವುದಿಲ್ಲವೇ. ಸರ್ಕಾರ ಬೇರೆ ಕ.ಪ್ರಾ.ಶಿ. (ಕಡ್ಡಾಯ ಪ್ರಾಥಮಿಕ ಶಿಕ್ಷಣ) ಜಾರಿಗೆ ತಂದಿದೆ, ಛೆ ಪಾಪ ಅನ್ನುತ್ತೆ. ಎರಡು ಹೊತ್ತಿನ ಕೂಳಿಗೆ ಕಂಡಕಂಡವರಿಂದ ಅನ್ನಿಸಿಕೋಬೇಕು. ಮನೆಯವರು ಮರ್ಯಾದೆಯಿಂದ ಏನಾದರೂ ಕೊಟ್ಟರೆ ಸರಿ 'ಥೂ ಸೋಂಬೇರಿಗ್ಳೆ ಕಷ್ಟ ಪಡಕ್ಕೆ ಇವರಿಗೇನು ಧಾಡಿ' ಎಂದು ದಢಾರ್ ಅಂತ ಬಾಗಿಲು ಹಾಕುವವರೂ ಇದ್ದಾರೆ. ಇವನ ಮಕ್ಕಳು ಯಾವ ಕಾಲಕ್ಕೆ ಕ.ಪ್ರಾ.ಶಿ. ಮುಗಿಸಿ ಗ್ರಾಜುಯೇಟ್ ಆಗಿ 'ಎಂಪ್ಲಾಯೀ' ಆಗಿ ಅವನ/ಅವಳ ಮಕ್ಕಳು ಇನ್ಯಾವಾಗ ಇಂಜಿನಿಯರ್‌ಗಳಾಗಿ ಮುಂದೆ ಅವರ ಸಂತತಿ ಕ.ತಾಂ.ಶಿ. (ಕಡ್ಡಾಯ ತಾಂತ್ರಿಕ ಶಿಕ್ಷಣ)ಯಲ್ಲಿ ಮಿಂಚಿ ಅಮೆರಿಕೆಗೆ ಹೋಗಿ NRIಗಳಾಗಿ ಮರಿಮಕ್ಕಳು ಕೋಲುತಾತನ ಪೀಪಿಯನ್ನು 'ಹೆರಿಟೇಜ್' ಮಾಡಿ ಬಿಳಿ ಗೆಳೆಯ ಗೆಳತಿಯರಿಗೆ ಭಾರತದ 'ಭವ್ಯ ಪರಂಪರೆ'ಯ ಬಗ್ಗೆ ಕೊರೆಯುವುದು! ಸಂಸ್ಕೃತಿ, ಪರಂಪರೆ, ಕಲೆ ಎಂದು ಉದ್ದುದ್ದ ಭಾಷಣ ಬಿಗಿಯುವ ಲೀಡರ್‌ಗಳೇ ಈ ನಾದಸ್ವರ ಊದಿ ಬದುಕು ಮಾಡುವಂಥವನ ಹೊಟ್ಟೆಯ ಮೇಲೆ ಹೊಡೆದವರಲ್ಲವೇ?

ಕೋಪ ನೆತ್ತಿಗೇರುತ್ತಿದಂತೆ ಯಮನ್‌ನ ತಾನ್ ಬಾಜ್‌ಗಳು fast ಆಗುತ್ತಿವೆ. ಈತನನ್ನ ಸರ್ಕಾರ 'ಗುರಿತಿಸಿದ್ದರೆ' ಒಂದೆರಡು ಬಾರಿ ಯುರೋಪ್, ರಷ್ಯಾ ನೋಡಿ ಬರಬಹುದಿತ್ತೇನೋ. ಅಥವಾ ಈತ ಅಕಾಡೆಮಿ ಸೇರಿದಿದ್ದರೆ ತನ್ನ ಹಿರಿಯರ ಪೀಪಿಗಳನ್ನೆಲ್ಲ ಪ್ರಿಸರ್ವ್ ಮಾಡಿ ವಿದೇಶೀ ಟೂರಿಸ್ಟ್‌ಗಳಿಗೆ ತೋರಿಸಿ ಸಂಪಾದಿಸಬಹುದಿತ್ತೇನೋ, ಅಥವಾ 6, 8 ತಿಂಗಳ ಕ್ರಾಶ್‌ಕೋರ್ಸ್ ಮಾಡಿ ಮ್ಯೂಸಿಕ್ಕನ್ನು ಮಾರ್ಕೆಟಿಂಗ್ ಮಾಡಿದ್ದಲ್ಲಿ ಹಿಟ್ಟಿನ ಜೊತೆ ಹ್ಯಾಂಬರ್ಗರ್ ತಿನ್ನಬಹುದಿತ್ತೇನೋ......ಅಥವಾ ಕಲೆ ನನ್ನ ಉಸಿರು, ಬಸಿರು ಎಂದು ಬೇರೇನೂ ಕೆಲಸ ಮಾಡದೆ ಅದನ್ನೇ invest ಮಾಡಿದ್ದರೆ ಒಂದಷ್ಟು ಬಿರುದು ಬಾವಲಿ ಪಡೆದುಕೊಂಡು, ಜೀ...ಎಂದು ಕರೆಸಿಕೊಂಡು, ಭಾರತದ ಸಾಂಸ್ಕೃತಿಕ ರಾಯಭಾರಿ ಆಗುತ್ತಿದ್ದನೇನೋ?

ನನಗೂ ಗೊತ್ತಾಗ್ತಾ ಇದೆ. ನಾನು ಏನೇನೋ ಬರೀತಾ ಇದ್ದೀನಿ. ಮೇಲಾಗಿ ಹೇಗೇಗೋ ಬರೀತಾ ಇದ್ದೀನಿ. ಬದುಕಿನುದ್ದಕ್ಕೂ ನಾವು ನಿಭಾಯಿಸುವುದನ್ನೇ ಕಲಿಯುತ್ತಾ ಹೋಗುತ್ತೇವೆ. ಫ್ರೀಡಂ ಅನ್ನು ಹತ್ತಿರವೂ ಸೇರ್ಸಲ್ಲ, ನಂಗೆ ಗೊತ್ತಿದೆ. ಆದರೂ ಮನಸ್ಸೇನೂ (ಪ್ರಾಚೀನ ವ್ಯಾಕರಣಕಾರ) ಚೇಲಾ ಅಲ್ಲವಲ್ಲ. ಗುಡ್, ನನ್ನನ್ನು ಈಗ ಕಾಡುತ್ತಿರುವ ಪ್ರಶ್ನೆ ಇಷ್ಟೆ. ತುಂಬ 'ಓದಿದ' ಜನ ಮಾತ್ರ ಬದುಕು ಮಾಡಬೇಕೇ? ಹೊಟ್ಟೆ ಪಾಡಿಗೆ ಶಾಲೆ ಕಾಲೇಜು ಶಿಕ್ಷಣವೇ ಆಗಬೇಕೇ? ಬೇರೆ ಎಷ್ಟೊಂದು ಮಾರ್ಗಗಳಿಲ್ಲ. ಅವೆಲ್ಲ ಶ್ರೇಷ್ಠವಲ್ಲವೇ? ಇಡೀ ಬದುಕು ದಿನವೂ ಕೆಲವು ಗಂಟೆಗಳ ಕಾಲ ನಾದಸ್ವರ ಸಂಗೀತ ಪಾಠ ಮಾಡಿ, ಚೂರು ಜಮೀನಿನಲ್ಲಿ ದುಡಿದು, ಮನೆಯಲ್ಲಿ ಒಂದಷ್ಟು ಚಾಕರಿ ಮಾಡಿ, ಒಂದಷ್ಟು ಮನೆಗಳಿಗೆ ಹೋಗಿ ಸಂಗೀತ ಕೇಳಿಸಿ ಅಕ್ಕಿ ರಾಗಿ ಹೊತ್ತುಕೊಂಡು ಚಿಲ್ಲರೆ ಕಾಸು ಸಂಪಾದಿಸಿ ತಣ್ಣಗೆ ಬದುಕು ಮಾಡುವುದು ಪುಣ್ಯದ ಕೆಲಸವಲ್ಲವೇ? ಇವರು ಹೇಗೆ ಸೋಂಬೇರಿಗಳು? ಜಾವ, ಸಿ ಪ್ಲಸ್ ಪ್ಲಸ್ (C++), ಆರೆಕಲ್ ಕಲಿಯಲು ಒಂದೆರಡು ವರ್ಷ ಸಾಕು. ಸಂಗೀತ ಅರಗಿಸಿಕೊಳ್ಳಲು ಎರಡು ಜನ್ಮಗಳೂ ಸಾಲದೇನೋ. ಕೂತು ಇಲಿ ಆಡಿಸುವವರಿಗೆ 20,000 ಸಂಬಳ! ಇವರು ಶ್ರಮಜೀವಿಗಳು! ಬಸವಣ್ಣನ್ನ ಸಾಕಿ ಮೆರೆಸಿ, ನಾದಸ್ವರ ಊದುತ್ತ ಊರೂರು ತಿರುಗಿ, ಇಷ್ಟೋ ಇಷ್ಟೇ ಖರ್ಚು ಮಾಡುವ ಇವರು ಸೋಂಬೇರಿಗಳು! ಪುಣ್ಯದ ಜೀವನ ಮಾಡುತ್ತಿರುವ ಇವರು "ಮುಂದೆ ಬರಬೇಕಂತೆ!" ಭಾರತ ಅಮೆರಿಕೆಯಾಗಲು, ಬೆಂಗಳೂರು ಸಿಂಗಪೂರ್ ಆಗಲು ದರ್ಬಾರಿನಲ್ಲಿ ಹುನ್ನಾರ ನಡೆಯುತ್ತಿದ್ದರೆ ಅದಕ್ಕೆ ಇಲ್ಲಿಯ ಮನೆಮನೆಗಳಲ್ಲಿ ಹೋ ಎಂದು ಜಾತ್ರೆ. ನಮ್ಮ ಬುದ್ಧಿಗಳಿಗೇ ನಾಗಿದೆ? ನಂಗಂತೂ ಅರ್ಥ ಆಗಲ್ಲ.

❑ *ಚಿತ್ರ*

# ಬಿ.ಎಚ್.ಇ.ಎಲ್. ಮಧ್ಯಪ್ರದೇಶದ ಮಹೇಶ್ವರ ಜಲವಿದ್ಯುತ್ ಯೋಜನೆಯಲ್ಲಿ ಕೈಹಾಕುತ್ತಾ ವಿನಾಶದ ಹಾದಿ ಹಿಡಿದಿದೆ

**ಬಿ.**ಎಚ್.ಇ.ಎಲ್. ಅನ್ನು ನರ್ಮದಾ ನದಿಯ ಮೇಲೆ ಕಟ್ಟಲಾಗುತ್ತಿರುವ ಜಲವಿದ್ಯುತ್ ಯೋಜನೆಯಲ್ಲಿ 49% ಬಂಡವಾಳವನ್ನು ಹೂಡುವಂತೆ ಹಾಗೂ ದುಬಾರಿ ಟರ್ಬೈನ್‌ಗಳನ್ನು ಸರಬರಾಜು ಮಾಡುವಂತೆ ತಳ್ಳಲಾಗುತ್ತಿದೆ. ಈ ಯೋಜನೆ ವಿನಾಶಕಾರಿಯಾಗಿದೆ ಎಂದು ಹಾಗೂ ಲಾಭದಾಯಕ ವಲ್ಲವೆಂದು ಅರಿತು ಹಲವಾರು ಬಹುರಾಷ್ಟ್ರೀಯ ಕಂಪನಿಗಳು ಇದರಿಂದ ಹೊರಬಂದಿದ್ದಾರೆ. ಭಾರತದಲ್ಲಿ ಮೊಟ್ಟ ಮೊದಲನೆಯ ಪೂರ್ತಿಯಾಗಿ ಖಾಸಗೀಕರಣಗೊಂಡ ಈ ಯೋಜನೆಯನ್ನು ರೂ. 2254 ಕೋಟಿಗಳನ್ನು ಖರ್ಚು ಮಾಡಿ, ಈಗಾಗಲೇ ಸೌಕರರ ವಿಚಾರದಲ್ಲಿ ಕುಖ್ಯಾತವಾಗಿರುವ, ಈ ರಂಗದಲ್ಲಿ ಯಾವುದೇ ಅನುಭವವಿರದ ಎಸ್. ಕುಮಾರ್ಸ್ ಕಂಪನಿ ಕಟ್ಟಲು ಮುಂದಾಗಿದೆ.

**ಈಗಿನ ಪರಿಸ್ಥಿತಿ :** ನರ್ಮದಾ ನದಿಯ ಮೇಲೆ ನಿರ್ಮಿತವಾಗುತ್ತಿರುವ ಅತಿ ದೊಡ್ಡ ಅಣೆಕಟ್ಟುಗಳಲ್ಲಿ ಒಂದಾದ ಮಹೇಶ್ವರ ಅಣೆಕಟ್ಟು ಇಡೀ ಕಣಿವೆಯನ್ನು ನಿರ್ನಾಮ ಮಾಡಲಿದೆ. ಎನ್ರಾನ್‌ನಂತೆ ಇಲ್ಲಿ ಉತ್ಪಾದಿಸಲಾಗುವ ವಿದ್ಯುತ್‌ನ ಒಂದು ಯೂನಿಟ್‌ಗೆ ಜನ ರೂ. 7 ತೆತ್ತ ಬೇಕಾಗುತ್ತದೆ. 80% ವಿದ್ಯುತ್ ಮಳೆಗಾಲದ ಸಮಯದಲ್ಲಿ ಉತ್ಪಾದಿಸಲಾಗುವ ಕಾರಣ, ರೈತರಿಗೆ ಇದರಿಂದ ಪ್ರಯೋಜನ ವಾಗುವಂತೆ ಕಾಣುವುದಿಲ್ಲ. ಇದರ ಫಲಾನುಭವಿಗಳಿಂದ ರೈತರು, ನೇಕಾರರು ಹಾಗೂ ಸಣ್ಣ ಉದ್ಯಮಗಳು ಇದರ ದುಬಾರಿ ಬೆಲೆಯಿಂದ ನಾಶಗೊಳ್ಳಲಿದ್ದಾರೆ.

ಮಹೇಶ್ವರ ಅಣೆಕಟ್ಟಿನ ನೀರಿನಲ್ಲಿ 61 ಹಳ್ಳಿಗಳು, ತನ್ನ ಸಮಸ್ತ ಫಲವತ್ತಾದ ಭೂಮಿ, ಅರಣ್ಯದೊಂದಿಗೆ ಮುಳುಗಲಿದೆ. ಇದಲ್ಲದೆ, ಮರಳಲ್ಲಿ ಕೆಲಸ ಮಾಡುವ ಕೂಲಿಕಾರರು, ಮೀನುಗಾರರು ಹಾಗೂ ಇನ್ನಿತರರು ತಮ್ಮ ಸಂಸ್ಕೃತಿ ಹಾಗೂ ಜೀವನ ಕ್ರಮಗಳೊಂದಿಗೆ ನೀರಿನ ಪಾಲಾಗಲಿದ್ದಾರೆ.

**ಬಾಂಬೆಯಲ್ಲದಾ ಹೋರಾಟ :** ನರ್ಮದಾ ಬಚಾವೋ ಆಂದೋಲನದ ಕಾರ್ಯಕರ್ತರು ಮೇ 31 ಹಾಗೂ ಜೂನ್ 1 ರಂದು ಹೋರಾಟ ರೂಪಿಸಿ ಬಂಡವಾಳ ಹೂಡಿಕೆದಾರರು ಮತ್ತು ಅದರ ಅಧಿಕಾರಿಗಳು ಮಹೇಶ್ವರ ಅಣೆಕಟ್ಟೆಗೆ ಬಂಡವಾಳ ಹೂಡುವುದು ಎಷ್ಟು ಸಮರ್ಥ ಎನ್ನುವುದರ ಬಗ್ಗೆ ಮರು-ಚಿಂತನೆಗೆ ಗುರಿಪಡಿಸಿದ್ದಾರೆ. ಇದಲ್ಲದೆ ನರ್ಮದಾ ಬಚಾವೋ ಆಂದೋಲನ ರಿಸರ್ವ್ ಬ್ಯಾಂಕಿಗೆ ಪತ್ರ ಬರೆದು ಸಾವಿರಾರು ಕೋಟಿ ಸಾರ್ವಜನಿಕ ಹಣವನ್ನು ಯಾವುದೇ ಪರಿಣಾಮವಿಲ್ಲದ ಆಸ್ತಿಗೆ ಹಾಕುವುದು ಎಷ್ಟು ಸಮಂಜಸ ಎಂದು ಪ್ರಶ್ನಿಸಿವೆ, ಹಾಗೂ ಇದು ಹೇಗೆ ಕಾನೂನು ಬಾಹಿರವೆಂಬುದನ್ನು ಅದರ ಗಮನಕ್ಕೆ ತಂದಿದೆ. ಹಾಗೂ 6,000 ಕೋಟಿಯಷ್ಟು ಸಾರ್ವಜನಿಕ ಹಣ ಎನ್‌ರಾನ್‌ನಲ್ಲಿ ಹೇಗೆ ಉಪಯೋಗವಿಲ್ಲದೆ ಹೋಗಿರುವ ಮಹಾರಾಷ್ಟ್ರದ ವಿಚಾರವನ್ನು ಕೂಡ ಅದರ ಗಮನಕ್ಕೆ ತಂದಿದೆ ಹಾಗೂ ಆ ಮೂಲಕ ಶಕ್ತಿ ಹಾಗೂ ಉತ್ಪಾದನೆಯ ಉಪಯೋಗ ಆಗದಿದ್ದರ ಬಗ್ಗೆ ಕೂಡ ಇಲ್ಲಿ ನಮೂದಿಸಲಾಗಿದೆ. ಆಂದೋಲನ ಈ ಯೋಜನೆಯ ಬಗ್ಗೆ ಇರುವ ಗಂಭೀರ ಪ್ರಶ್ನೆಗಳನ್ನೆಲ್ಲ ಅವರ ಮುಂದಿಟ್ಟಿದ್ದಾರೆ.

**ಹೋರಾಟ ಹಾಗೂ ಪರಿಣಾಮಗಳು:** ಅಭಿವೃದ್ಧಿಯ ಹೆಸರಲ್ಲಿ ವಿನಾಶಕ್ಕೊಳಗಾಗುತ್ತಿರುವ ಜನರೆಲ್ಲಾ ನರ್ಮದಾ ಬಚಾವೋ ಆಂದೋಲನದ ಅಡಿಯಲ್ಲಿ ಈ ಯೋಜನೆಯ ವಿರುದ್ಧ ಪ್ರತಿಭಟಿಸುತ್ತಿದ್ದಾರೆ. ಮಧ್ಯ ಪ್ರದೇಶ ಸರ್ಕಾರದ ಕಾರ್ಯಪಡೆ, ಕೇಂದ್ರ ಸರ್ಕಾರದ ಪರಿಸರ, ಮಂತ್ರಾಲಯದ ವರದಿ ಹಾಗೂ ಜರ್ಮನಿ ಸರ್ಕಾರ ನೇಮಿಸಿದ ಅಂತರ ರಾಷ್ಟ್ರೀಯ ಸ್ವತಂತ್ರ ಅವಲೋಕನಾ ಸಮಿತಿ - ಇವೆಲ್ಲವೂ ಈ ಯೋಜನೆಯ ಬಗ್ಗೆ ಗಂಭೀರ ಪ್ರಶ್ನೆಗಳನ್ನು ಮುಂದಿಟ್ಟಿದ್ದಾರೆ. ಹೀಗಾಗಿ ಅಮೇರಿಕಾದ ಕಂಪನಿಗಳಾದ ಓಗ್ಡೆನ್ ಪಾಕೆಜೆಸ್, ಹರ್ಜಾ, ಜರ್ಮನಿ ಕಂಪನಿಗಳಾದ ಬೇಯನ್ ವರ್ಕ್, ಪಿ. ಡಬ್ಲ್ಯೂ. ಎನರ್ಜಿ, ಸೀಮನ್ಸ್ ಈ ಯೋಜನೆ ಯಿಂದ ಹೊರಬಂದಿದ್ದಾರೆ. ಮಹೇಶ್ವರ ಯೋಜನೆಗೆ ಜರ್ಮನಿ ಹಾಗೂ ಪೋರ್ಚುಗಲ್ ಸರ್ಕಾರಗಳು ಎಕ್ಸ್‌ಪೋರ್ಟ್ ಗ್ಯಾರಂಟಿಯನ್ನು ರದ್ದು ಮಾಡಿದ್ದಾರೆ.

**ಬಲೆಗೆ ಬೀಳುತ್ತಿರುವ ಬಿ.ಎಚ್.ಇ.ಎಲ್. :** ವಿದೇಶಿ ಕಂಪನಿಗಳು ಈ ಯೋಜನೆಯನ್ನು ಕೈಬಿಡುತ್ತಿರುವಾಗ ಬಿ.ಎಚ್.ಇ.ಎಲ್. ಅಂತಹ ಸಾರ್ವಜನಿಕ ಉದ್ದಿಮೆಯನ್ನು ಈ ಯೋಜನೆಯ ಬಲೆಯಲ್ಲಿ ಬೀಳಿಸಲು ಭ್ರಷ್ಟ ರಾಜಕೀಯ ಶಕ್ತಿಗಳು ಪ್ರಯತ್ನಿಸುತ್ತಿವೆ. ಕೇಂದ್ರ ಸರ್ಕಾರವು ಈ ಯೋಜನೆಗೆ ಯಾವುದೇ ಖಾತರಿ ನೀಡಲು ಸಿದ್ಧವಿಲ್ಲ ಎಂದಿದೆ, ಮಧ್ಯ ಪ್ರದೇಶದ ಸರ್ಕಾರ ಯಾವುದೇ ಮರುಪಾವತಿ ಸಾಧ್ಯವಿಲ್ಲ ಎನ್ನುವಂತಿದೆ.

ಈಗಾಗಲೇ ನಷ್ಟದಲ್ಲಿರುವ ಬಿ.ಎಚ್.ಇ.ಎಲ್.ಅನ್ನು ವಿದೇಶಿ ಕಂಪನಿಗಳಿಗೆ ಅಗ್ಗದ ಬೆಲೆಗೆ ಮಾರಿಬಿಡುವ ಅವಕಾಶ ಗಳಿವೆ. ಬಿ.ಎಚ್.ಇ.ಎಲ್. ಹಾಗೂ ಅದರ ನೌಕರರ ಭವಿಷ್ಯವನ್ನು ಸುರಕ್ಷಿತವಾಗಿರಿಸಲು ಇಂತಹ ಹುನ್ನಾರಗಳನ್ನು ಪ್ರತಿಭಟಿಸ ಬೇಕಾಗಿದೆ.

ಖಾಸಗೀಕರಣ ಕೇವಲ ವಿದ್ಯುತ್ ಉತ್ಪಾದನೆಗೆ ಮಾತ್ರ ಸೀಮಿತವಾಗಿಲ್ಲ, ಮೇಲೆ ತಿಳಿಸಿರುವ ಮಹೇಶ್ವರ ಹಾಗೂ ಎನ್ರಾನ್‌ನಂತೆ ಕರ್ನಾಟಕದಲ್ಲಿ ತಲೆ ಎತ್ತುತ್ತಿರುವ ಕೊಜೆಂಟ್ರಿಕ್ಸ್ ಹಾಗೂ ತಣ್ಣೀರು ಬಾವಿ ಯೋಜನೆಗಳನ್ನು ಇಂದು ನಾವು ತಡೆಗಟ್ಟಬೇಕಾಗಿದೆ.

# ರೆಕ್ಕೆಗಳೇ ಹುಟ್ಟುವಿರಾ!

❑ ಡಾ. ಆರ್. ಸುನಂದಮ್ಮ

ಪೂರ್ವದಿಂದ ಪಶ್ಚಿಮಕ್ಕೆ
ದಿನಕರನ ಪಯಣ ಆದರೆ
ನನ್ನೊಳಗಿನ ಹಕ್ಕಿಯೊಂದು
ಕುಳಿತು ಕೇಳುತ್ತಿದೆ
ಪಶ್ಚಿಮದಿಂದ ಪೂರ್ವಕ್ಕೆ
ಯಾರ ಪಯಣ?

ಕಠೋರ ಸತ್ಯ
ಬಿಚ್ಚಲಾರದ ಗಂಟುಗಳಲ್ಲಿ
ಹರಿತವಾದ ಕತ್ತಿಗಳ ನಡುವೆ
ಸಿಕ್ಕು ಸಿಕ್ಕಾಗಿ ಹೋಗುತ್ತಾ
ಚುಚ್ಚಿ ಚುಚ್ಚಿ ಹೇಳುತ್ತದೆ
ಪಯಣ ಎಲ್ಲಿಂದ ಎಲ್ಲಿಗೆ
ಯಾರು ಹೇಳಬಲ್ಲರು
ಇದೆಲ್ಲಾ ನಾವು ನೀವು ಕಟ್ಟಿಕೊಂಡ
ಅಳತೆಯ ಮಾಪನ
ಅದು ಬರೀ ಊಹೆಯ ರೇಖೆ.

ಊಹೆ ಬದುಕಿನ ಹಂದರ
ದಿನನಿತ್ಯದ ಬವಣೆ
ಬೇಸಳ, ನಿಂದೆ, ಗೋಣಗಾಟ
ಷಮ್ಮ ನಮ್ಮ ಮನದಾಳದ ಬಯಕೆಗಳ
ಪ್ರತಿಫಲ
ಇದರಲ್ಲಿ ಸತ್ಯ ಮಿಥ್ಯೆಗಳ
ಅಳತೆಗೋಲುಗಳು ಅವರವರ ಭಾವದ ಒಳ ಅರಿವಿನ
ಉತ್ಪನ್ನದ ಗೋಲ

ಗುಂಡಿ ಒತ್ತಿದಾಗ ರೆಕ್ಕೆ
ಬಿಚ್ಚಿ ಓಡುವ ವಿಮಾನ
ಗಗನದಲ್ಲಿ ವಿಮಾಹ

ಮತ್ತೆ ಗುಂಡಿ ಒತ್ತಿದರೆ
ಆಗೋ ಒಂದೇ ಕ್ಷಣದಲ್ಲಿ
ಭೂಮಿ ಅದರ ತಾಣ.

ಆಸೆಗಳ ರೆಕ್ಕೆಗಳಿಗೆ
ಹಾರುವ ತಾಕತ್ತು ಇಲ್ಲ
ನಿತ್ಯ ಗಾಳಿ ಹಾಕಲು ಶಕ್ತಿ ಇಲ್ಲ
ಶಕ್ತಿ ವರ್ಧಕಗಳ ಕೊರತೆ ಹುಟ್ಟಿನಿಂದ.

ಕಬ್ಬಿಣ ಕಬ್ಬಿನ ನಡುವೆ ಒಂದಕ್ಷರ
ಅಂತರ ಆದರೆ ಎರಡಕ್ಕೂ
ಅಜಗಜಾಂತರ ಅರ್ಥದ ಅಂತರ
ಹಾಗೆ ಇಬ್ಬರೂ ಮನುಷ್ಯ ದೇಹಗಳು
ಇಬ್ಬರ ನಡುವೆ ಚಿಂತಿಸುವ
ಮನಸ್ಸುಗಳು ಭಿನ್ನ ಭಿನ್ನ

ದೇಹ ರೂಪಗಳ ಭಿನ್ನತೆಗೆ
ಮೌಲ್ಯಗಳ ಅಂತರ ಕಟ್ಟುವ
ಗೋಡೆ ಒಡೆಯಲಾಗದೆ ನಿತ್ಯ
ನಿರಂತರವಾಗಿ ಬಿಡುತ್ತಿದೆ ತಾಕಲಾಟ
ಅದರಿಂದ ಖರೀ ಪಿಕಲಾಟ

ರೆಕ್ಕೆ ಕಟ್ಟಿದರೂ ಅಷ್ಟೇ
ಅವು ಹಾರಲೊಲ್ಲವು ನಿತ್ಯ
ಹುಟ್ಟಿ ಬೆಳೆಯಬೇಕು ದೇಹದ
ಕಣ ಕಣಗಳ ಒಳಗಿಂದ
ಆಗ ಹಾರುವ ಹುಮ್ಮಸ್ಸು
ತಾನಾಗಿಯೆ ಹುಟ್ಟಿ ಬರುತ್ತದೆ
ಅರಿವಿನಿಂದ ಭೂಮಿ ದಿಗಂತ
ಚಲಿಸುತ್ತದೆ ಭೂಮಿ ದಿಗಂತ
ಒಂದು ಮಾಡಿ.

# ಯಾರದೋ ತಪ್ಪಿಗೆ ಯಾರಿಗೋ ಶಿಕ್ಷೆ

## (ಶೋಷಣೆಯ ಇನ್ನೊಂದು ಮುಖ)

ಇದು ದೈಹಿಕವಾಗಿ, ಮಾನಸಿಕವಾಗಿ ನರಳುತ್ತಿರುವ ಹೆಣ್ಣೊಬ್ಬಳ ಸತ್ಯಕಥೆ. ಈ ಸತ್ಯಕಥೆಯ ಹೆಣ್ಣಿನ ಪರಿಚಯ ನನಗಾಗಿದ್ದು ಕೇವಲ ಒಂದು ವರ್ಷದ ಹಿಂದೆ. ಆ ಹೆಣ್ಣು ಈ ಒಂದು ವರ್ಷದಲ್ಲಿ ನನ್ನ ಆತ್ಮೀಯ ಗೆಳತಿಯಾಗಿದ್ದಾಳೆ. ಅವಳ ಅಂತರಂಗದ ನೋವು, ನನ್ನನ್ನು ಬರೆಯುವಂತೆ ಪ್ರೇರೇಪಿಸಿತು. ಅವಳ ಬಾಳಿನ ಗೋಳಿನ ಕಥೆಯನ್ನು ನಿಮ್ಮ ಮುಂದಿಡುತ್ತಿರುವೆ. ಬೆಂಗಳೂರಿನ ಫ್ಯಾಕ್ಟರಿಯೊಂದರಲ್ಲಿ ಕೆಲಸದಲ್ಲಿರುವ ನನ್ನ ಗೆಳತಿ ಅಂಗವಿಕಲೆ. ಹುಟ್ಟಿದ 5 ವರ್ಷಕ್ಕೇ ಪೋಲಿಯೋದಿಂದ ಒಂದು ಕಾಲು ಊನವಾಗಿತ್ತು. ಅವಳ ಗಂಡ ಅನ್ನಿಸಿಕೊಂಡವನು, ಅದೇ ಫ್ಯಾಕ್ಟರಿಯ ಇನ್ನೊಂದು ಬ್ರಾಂಚ್‌ನಲ್ಲಿ ಕೆಲಸ ಮಾಡುವವನು. ಅವನಿಗೆ ನನ್ನ ಗೆಳತಿ ಎರಡನೆಯ ಹೆಂಡತಿ. ಮೊದಲ ಹೆಂಡತಿ, ನನ್ನ ಗೆಳತಿಯ ಸ್ವಂತ ಅಕ್ಕನೇ ಎನ್ನುವುದು ಆಶ್ಚರ್ಯದ ವಿಷಯ.

ಅವನು ಹಳ್ಳಿಯಲ್ಲಿರುವಾಗ ತನ್ನ ಮನೆಯವರೊಂದಿಗೆ, ಕ್ಷುಲ್ಲಕ ಕಾರಣಕ್ಕಾಗಿ ಜಗಳ ಮಾಡಿಕೊಂಡು ಅಕ್ಕನ ಮನೆ ಸೇರಿದ. ಸ್ವಲ್ಪ ಜಮೀನನ್ನು ಖರೀದಿಸಿ ಬೇಸಾಯ ಮಾಡತೊಡಗಿದ. ಹತ್ತಿರದ ಮನೆಯವರ ಪರಿಚಯವಾಯಿತು. ಆ ಮನೆಯಲ್ಲಿ ಇಬ್ಬರು ಹೆಣ್ಣುಮಕ್ಕಳು. ಒಬ್ಬಳು ಯಾವುದೇ ಕುಂದುಕೊರತೆ ಯಿರದವಳು. ಇನ್ನೊಬ್ಬಳು ಅಂಗವಿಕಲೆ. ಪರಿಚಯ ಕ್ರಮೇಣ ಹಿರಿಯವಳ ಸಂಗಡ ಪ್ರೀತಿಗೆ ಕಾರಣವಾಯಿತು. ಅವಳ ಮನೆಯವರೂ ಸ್ಥಿತಿವಂತರಲ್ಲದ್ದರಿಂದ ಇವನಿಗೆ ಸಂತೋಷ ದಿಂದಲೇ ಮಗಳನ್ನು ಮದುವೆ ಮಾಡಿಕೊಟ್ಟರು. ಮದುವೆಯಾದ ಮೇಲೆ ಮಾವನ ಮನೆ, ಅಕ್ಕನ ಮನೆ ಹೀಗೇ ಕಾಲ ಕಳೆಯತೊಡಗಿದ. ಕ್ರಮೇಣ ಸುಧಾರಿಸುತ್ತಾನೆ ಎಂದು ಕೊಂಡು, ಯಾರೂ ಬುದ್ಧಿ ಹೇಳಲಿಲ್ಲ. ಒಬ್ಬ ಮಗ ಹುಟ್ಟಿದ ಮೇಲೆ ಗಂಡ ಹೆಂಡತಿಯರಲ್ಲಿ ವಿರಸ ಮೂಡಿತು. ಕಾರಣ ವೆಂದರೆ, ಅವನ ಹೆಂಡತಿ ಸಂಶಯ ಸ್ವಭಾವದವಳು. ಸಣ್ಣ ಕಾರಣಕ್ಕೂ ಗಂಡನ ಮೇಲೆ ರೇಗುವುದು, ಅವನನ್ನು ದೂಷಿಸುವುದು ಮಾಡುತ್ತಿದ್ದಳು. ಮಾನಸಿಕ ಅಸ್ವಸ್ಥತೆಯಿಂದ ಬಳಲುತ್ತಿದ್ದಳು. ಗಂಡ, ತನ್ನ ಅಂಗವಿಕಲೆ ತಂಗಿಯೊಂದಿಗೆ, ಆತ್ಮೀಯವಾಗಿ ಮಾತಾಡುವುದನ್ನೂ ಸಹಿಸುತ್ತಿರಲಿಲ್ಲ. ತಂಗಿ ಎಂದರೆ ಮೊದಲಿಂದಲೂ ತಾತ್ಸಾರವಾಗಿತ್ತು. ಒಂದು ದಿನ ಗಂಡ ಮಲಗಿದಾಗ ಅವನನ್ನು ಉಸಿರುಗಟ್ಟಿಸಿ ಸಾಯಿಸುವ ಉಪಾಯವನ್ನೂ ಮಾಡಿದಳು. ಮನೆಯಲ್ಲಿ ಯಾರೂ ಇಲ್ಲದ ಒಂದು ದಿನ, ಅವನು ಒಂದು ಕಂಬಳಿ ಹಾಸಿ, ಇನ್ನೊಂದನ್ನು ಹೊದ್ದು ಮಲಗಿದ್ದನು. ಇವಳು ಮೇಲಿನ ಮತ್ತು ಕೆಳಗಿನ ಕಂಬಳಿಗಳನ್ನು ಸೇರಿಸಿ ಹೊಲೆಯುತ್ತಿದ್ದಳು. ಅವನಿಗೆ ಗಾಢನಿದ್ರೆ ಆವರಿಸಿದ್ದರಿಂದ ಏನೂ ತಿಳಿಯಲಿಲ್ಲ. ಇನ್ನೇನು ಹೊಲಿಗೆ ಹಾಕುವುದು ಸ್ವಲ್ಪವೇ ಇದೆ ಎನ್ನುವಾಗ ಅವನಿಗೆ ಎಚ್ಚರ ವಾಯಿತು. ಹೆಂಡತಿಯ ಕೆಲಸ ನೋಡಿ ತಿರಸ್ಕಾರ ಮೂಡಿತು. ಇಬ್ಬರೂ ಹಠವಾದಿಗಳು. ಯಾರ ಮಾತಿಗೂ ಬಗ್ಗಲಿಲ್ಲ. ಹೀಗೆ, ವಿವಾಹ ವಿಚ್ಛೇದನವಾಯಿತು.

ಸ್ವಲ್ಪ ಸಮಯದ ನಂತರ ಅವನು ಆ ಊರನ್ನೇ ತೊರೆದು ಬೆಂಗಳೂರಲ್ಲಿ ಕೆಲಸಕ್ಕೆ ಸೇರಿಕೊಂಡನು. ಅಲ್ಲಿ ಅವನಿಗೆ ಅಂಗವಿಕಲೆ ನಾದಿನಿ(ನನ್ನ ಗೆಳತಿ)ಯ ಭೇಟಿ ಆಯಿತು. ಅವಳು, ಗಂಡನಿಂದ ವಿಚ್ಛೇದನ ಪಡೆದು ತವರಲ್ಲಿ ಉಳಿದ ಅಕ್ಕನ ಚುಚ್ಚುಮಾತುಗಳನ್ನು ಕೇಳಲು ಆಗದೇ, ತಂದೆ ತಾಯಿಯರ ಅಸಹಾಯಕತೆಯನ್ನು ನೋಡಲಾಗದೇ, ಅವರಿವರ ಸಹಾಯದಿಂದ ಬೆಂಗಳೂರು ಸೇರಿಕೊಂಡಿದ್ದಳು. ಮೃದು ಸ್ವಭಾವದ ನನ್ನ ಗೆಳತಿಗೆ, ಭಾವನ ಸ್ವಭಾವ ಇಷ್ಟವಾಗಿತ್ತು. ಭಾವ ನಾದಿನಿಯ ಆತ್ಮೀಯತೆ ಮದುವೆಯ ಹಂತಕ್ಕೆ ಹೋಯಿತು. ಅವಳು ತನ್ನ ಮದುವೆಯ ಬಗ್ಗೆ ಕನಸು ಕಂಡವಳಲ್ಲ. ಅಂಗವಿಕಲೆಯನ್ನು ಯಾರು ಮದುವೆ ಆಗುತ್ತಾರೆಂದು ಅಂದುಕೊಂಡಿದ್ದಳು. ಆದರೆ ಭಾವನೇ "ನಾವಿಬ್ಬರೂ ಮದುವೆಯಾಗುವಾ" ಎಂದಾಗ ಸ್ವರ್ಗಕ್ಕೆ ಮೂರೇ ಗೇಣು ಎನಿಸಿತ್ತು. ತನ್ನಕ್ಕನಿಂದ ಭಾವನಿಗೆ ಸಿಗದ ಪ್ರೀತಿ. 'ತಾನು ನೀಡಬೇಕು' ಎಂದು ಕನಸು ಕಟ್ಟಿದಳು. ಮನೆಯವರೆಲ್ಲರ ವಿರೋಧದ ನಡುವೆ ಮದುವೆ ನಡೆಯಿತು. ಮದುವೆಗೆ ಮೊದಲು, ಅನುಭವಿಸಿದ ನೋವು ಬಹಳವೇ ಆಗಿದ್ದರೂ, ಮದುವೆಯ ನಂತರ ಅವಳಿಗೆ ನಿಜವಾದ ನೋವಿನ ಅನುಭವವಾಗುತ್ತಿದೆ. ಒಮ್ಮೆ ಭಾವನಾದವನೇ 'ಪತಿ' ಎನಿಸಿಕೊಂಡಿದ್ದಾನೆ. ಮದುವೆಗೆ ನಾಲ್ಕುದಿನ ಮೊದಲು ಕಂಡ ಕನಸುಗಳು ನಂತರದ ನಾಲ್ಕೇ ದಿನಕ್ಕೆ ಮುದುಡಿ ಹೋದುವು. ಕಾರಣವೆಂದರೆ ಗಂಡ ಹೇಳಿದ ಮಾತು.

"ನಿನ್ನಕ್ಕ, ನನಗೆ ನೀಡಿದ ಮಾನಸಿಕ ನೋವನ್ನು ನೀನೂ ಅನುಭವಿಸಬೇಕು." ಎಂಬುದು. ಇದು ನಡೆದು 5-6 ವರ್ಷಗಳಾದವು. ಅಂದಿನಿಂದ ನನ್ನ ಗೆಳತಿ ಅನುಭವಿಸಿದ ನೋವು ಅಪಾರ. ಅವಳನ್ನ ಮದುವೆಯಾದವನು ನನ್ನ ದೂರದ ಬಂಧು. ಕಳೆದ ವರ್ಷ ಅವರ ಮನೆಗೆ ಹೋದಾಗ ನನಗವಳ ಪರಿಚಯವಾಗಿದ್ದು. ನನ್ನ ಬಂಧುವಿನ ಬಗ್ಗೆ ಅದಾಗಲೇ ಒಡಕು ಮಾತುಗಳು ಕೇಳಿಬರುತ್ತಿದ್ದರಿಂದ ನನಗವನ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಅಲ್ಲಿ ಉಳಿದ ನಾಲ್ಕು ದಿನದಲ್ಲಿ ನನ್ನ ಗೆಳತಿಯ ನೋವು ನನ್ನ ಗಮನಕ್ಕೆ ಬಂತು. ಬೆಳಿಗ್ಗೆಯಿಂದ ಸಂಜೆಯತನಕ ಆಫೀಸಲ್ಲಿ ಕೆಲಸ, ಮನೆಗೆಲಸ, ಇವುಗಳಲ್ಲಿ ಅವಳು ಸೋತಿದ್ದಳು. ಮಹಡಿಯ ಮೇಲೆ ಇವರ ಬಾಡಿಗೆಮನೆ. ದಿನಕ್ಕೆ ಏಳೆಂಟು ಸಲವಾದರೂ ಇಳಿದು, ಹತ್ತಿ ಮಾಡಬೇಕಾಗಿದೆ. ಗಂಡನೆನಿಸಿಕೊಂಡವ ಯಾವುದೂ ತನಗೆ ಸಂಬಂಧವಿಲ್ಲ ಎನ್ನುವಂತೆ, ಇರುತ್ತಾನೆ. ಐದು ಗಂಟೆಗೆ ಆಫೀಸು ಮುಗಿದರೂ, ಮನೆಗೆ ಬರುವುದು 8-9 ಗಂಟೆಗೆ. 'ಯಾಕೆ ಅಷ್ಟು ಲೇಟು' ಎಂದು ಕೇಳಿದರೆ, ಸುಳ್ಳಿನ ಸರಮಾಲೆ ಸಿದ್ಧವಾಗಿರುತ್ತದೆ. ಬಂದ ಮೇಲೂ ಆತ್ಮೀಯವಾದ ಮಾತಿಲ್ಲ. ಎಲ್ಲರ ಜೊತೆ ನಗುನಗುತ್ತ ಮಾತಾಡುವ ಅವನು 'ಗೋಮುಖ ವ್ಯಾಘ್ರ.'

ನನ್ನ ಗೆಳತಿಗೆ ಮಾನಸಿಕ ಹಿಂಸೆಯಷ್ಟೇ ಅಲ್ಲ, ದೈಹಿಕ ನೋವೂ ಹೆಚ್ಚಾಗುತ್ತಿದೆ. ಈ ಐದಾರು ವರ್ಷಗಳಲ್ಲಿ ನಾಲ್ಕು ಬಾರಿ ಗರ್ಭಿಣಿ ಆಗಿ ಗರ್ಭಪಾತ ಮಾಡಿಸಿಕೊಂಡಿದ್ದಾಳೆ. ಗಂಡನಿಗೆ ಸುಖ ಬೇಕು. ಮಕ್ಕಳು ಬೇಡ. ಇವಳು ಎದುರಾಡುವವಳಲ್ಲ. ಗಂಡನೆಂದರೆ ದೇವರು. ತನಗೊಂದು ಬದುಕು ನೀಡಿದವನು ಎನ್ನುವ ಪೂಜ್ಯ ಭಾವನೆ ಬೆಳೆಸಿಕೊಂಡ ಮುಗ್ಧ ಹೆಣ್ಣು. ಈಗೀಗ ಅವಳ ಮುಗ್ಧತನವನ್ನು ಅವನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾನೆ. ಬೇರೆ ಹೆಣ್ಣಿನೊಂದಿಗೆ ಅನೈತಿಕ ಸಂಬಂಧವಿದೆ ಎಂದೂ ಕೇಳಿಬರುತ್ತಿದೆ. ಬಂದ ಸಂಬಳವೆಲ್ಲಾ ಹೇಗೋ ಖರ್ಚು ಮಾಡುತ್ತಾನೆ. ಇವಳು ತನಗೆ ಬಂದ ಸಂಬಳದಲ್ಲಿ ಮನೆ ನಡೆಸಬೇಕಾಗಿದೆ. ಪ್ರತಿಭಟಿಸಲು ಧೈರ್ಯವಿಲ್ಲ. ಈಗಿರುವ ನೆಲೆಯೂ ಇಲ್ಲವಾದರೆ? ಎಂಬ ಚಿಂತೆ ಅವಳನ್ನು ಹಗಲಿರುಳೂ ಕಾಡುತ್ತಿದೆ. ಅಕ್ಕ ಮಾಡಿದ ತಪ್ಪಿಗೆ ತಂಗಿಗೆ ಶಿಕ್ಷೆ. ಅವಳು ಅನುಭವಿಸುತ್ತಿರುವ ದೈಹಿಕ ಮಾನಸಿಕ ಹಿಂಸೆಗೆ ಕೊನೆ ಎಲ್ಲಿ? ಅವಳೇ ಉತ್ತರ ಕಂಡುಕೊಳ್ಳ ಬೇಕಾಗಿದೆ. ನಾವು ಅವಳಿಗೆ ಗಂಡನನ್ನು ಬಿಟ್ಟು ಬದುಕಲು ಹೇಳುವ ಹಾಗಿಲ್ಲ. ಅವನಿಗಂತೂ ಬುದ್ಧಿ ಹೇಳಲು ಸಾಧ್ಯವು ಇಲ್ಲ. ನಮಗೆಲ್ಲಾ ಈ ವಿಷಯ ತಿಳಿದಿದೆ ಎಂಬುದು ಅವನಿಗೆ ಗೊತ್ತಾದರೆ ನನ್ನ ಗೆಳತಿಗೆ ಇನ್ನಷ್ಟು ಹಿಂಸೆ ನೀಡುತ್ತಾನೆ. ಇವಕ್ಕೇನು ಪರಿಹಾರ? ಎಂದು ದಿನವೂ ಯೋಚಿಸುವಂತಾಗಿದೆ.

ಇದೇ ರೀತಿಯ ನಾನಾ ತರದ ಹಿಂಸೆಗಳನ್ನು ಅನುಭವಿಸುತ್ತಿರುವ ಹೆಣ್ಣುಗಳು ನಮ್ಮ ನಡುವೆ ಎಷ್ಟೋ ಇದ್ದಾರೆ. ಅವರಿಗೆಲ್ಲಾ ನಾವು ಧೈರ್ಯ ತುಂಬಿ ಇಂತಹ ಹಿಂಸೆಯನ್ನು ಪ್ರತಿಭಟಿಸುವಂತೆ ಮಾಡಲು ಶ್ರಮಿಸಬೇಕಾಗಿದೆ. ಇಂತಹ ಸ್ಯಾಡಿಸ್ಟ್ (ಬೇರೆಯವರಿಗೆ ಹಿಂಸೆ ಕೊಡುವುದರಲ್ಲಿ ತಮ್ಮ ಸಂತಸ ಕಾಣುವವರು) ಸ್ವಭಾವದ ಗಂಡಸರನ್ನು ಬಯಲಿಗೆಳೆಯಬೇಕಾಗಿದೆ. ಅಂತಹವರಿಂದ ಹಿಂಸೆ ಅನುಭವಿಸುತ್ತಿರುವ ಹೆಣ್ಣುಗಳು ಮಾನಸಿಕವಾಗಿ, ದೈಹಿಕವಾಗಿ ಎಷ್ಟು ನೊಂದಿರಬಹುದು' ಎಂಬುದನ್ನು ಯೋಚಿಸಬೇಕಾಗಿದೆ. ಅವರನ್ನು ಹಿಂಸೆಯಿಂದ ಮುಕ್ತಗೊಳಿಸುವಲ್ಲಿ ನಮ್ಮ-ನಿಮ್ಮೆಲ್ಲರ ಸಹಕಾರ ಅಗತ್ಯ. ನನ್ನ ಗೆಳತಿಯಂಥವರಿಗೆ ನಾವು ಯಾವ ರೀತಿಯಲ್ಲಿ ಸಹಾಯ ಮಾಡಬಹುದಾಗಿದೆ? ಅವಳೇನಾದರೂ ಅವನನ್ನು ಬಿಟ್ಟು ಬಂದಲ್ಲಿ ಆಶ್ರಯ ನೀಡಲಾದೀತೇ?

●

*ಲಕ್ಷಾಂತರ ವೈವಾಹಿಕ ತಕರಾರು ವ್ಯಾಜ್ಯಗಳ ಪೈಕಿ 16,239 ಸಾವಿರ ವರದಕ್ಷಿಣೆ ಸಾವುಗಳ ಪ್ರಕರಣದ ಕೇಸುಗಳು ನ್ಯಾಯಾಲಯದ ಮುಂದಿದೆ. ಹೆಚ್ಚಿನ ಮೊಕದ್ದಮೆಗಳು ಮಹಾರಾಷ್ಟ್ರದಲ್ಲಿ ದಾಖಲಾಗಿವೆ. ಇದರಿಂದಾಗಿ ಅಸಂಖ್ಯಾತ ದಂಪತಿಗಳು ತಮ್ಮ ಹಕ್ಕುಗಳಿಂದ ವಂಚಿತರಾಗಿದ್ದಾರೆ. ನ್ಯಾಯಾಲದ ವಿಳಂಬದಿಂದ ಬಹುಜನರು ಸಂಕಷ್ಟ ಅನುಭವಿಸುತ್ತಿದ್ದಾರೆ.*

# "ಜೆಂಟ್ಸ್ ಅಂದ್ರೆ ಜನರಲ್" .......?

❑ *ಚಿತ್ರ*

## ದೃಶ್ಯ 1

*ಆಫೀಸಿನ ಯೂನಿಯನ್ ಕಾನ್ಫರೆನ್ಸ್‌ಗೆ ಇನ್ನೂ ಮೂರೇ ದಿನ ಇದೆ. ರಾಜ್ಯಮಟ್ಟದ ಕಾನ್ಫರನ್ಸು. ಯೂನಿಯನ್ ಆಫೀಸಿನಲ್ಲಿ ನಾವೊಂದಷ್ಟು ಜನ ಸೇರಿದ್ದೆವು, ಒಂದಷ್ಟು ಹೋರಾಟದ ಹಾಡುಗಳನ್ನು ಪ್ರಾಕ್ಟೀಸ್ ಮಾಡಲು. ಪ್ರಾರ್ಥನೆಗೆ ದೇವರ ನಾಮ ಬೇಕೋ, ಹೋರಾಟದ ಹಾಡು ಬೇಕೋ ಎಂದು ಬಿಸಿ ಬಿಸಿ ಚರ್ಚೆಯಾಗಿತ್ತು. ದೇವರಿಗೆ ಹೆದರಿಕೊಂಡು 'ಎರಡೂ ಇರಲಿ' ಎಂದು* ತೀರ್ಮಾನವಾಯಿತು.

ಗುಂಪಿನಲ್ಲಿ ನಾವೈದು ಜನ 'ಲೇಡಿ ಕಾಮ್ರೇಡ್' ಮತ್ತು 'ಕಾಮ್ರೇಡ್' ಸಿದ್ದು ಇದ್ದೆವು.

'ಕಪ್ಪು ಕಪ್ಪು ಮೋಡದಲ್ಲಿ ಕಗ್ಗತ್ತಲ ಬಾನಿನಲ್ಲಿ ಮೂಡಿತೊಂದು ಕೆಂಪು ಚುಕ್ಕೆಯೋ

ಓ ರಾಮಣ್ಣ
ಬಡವರೆದೆಯ ಆಶಾಕಿರಣವೋ'

ಎಂಬ ಹಾಡನ್ನು ಹಾಡಲೇ ಬೇಕು ಎಂದು ತೀರ್ಮಾನಿಸಿದೆವು.

ಶುರುವಾತಿಗೇ ತಗಾದೆ ಆಯಿತು

ಲೇ.ಕಾ : ರೀ ಸಿದ್ದು ನೀವು 'ಹೈ ಪಿಚ್'ನಲ್ಲಿ ಹಾಡ್ತೀರ ನಮಗೆ ಆಗಲ್ಲಾರೀ

ಸಿದ್ದು : ಅಯ್ಯೋ ಯಾಕೆ ಮೇಡಂ ನೋಡಿ (ಕೆಂಪು ಚುಕ್ಕೆಯೋ ಎಂದು ಎತ್ತರದಲ್ಲಿ ಹಾಡಿ) ಆಗುತ್ತಲ್ಲ. ನಿಮಗೆ ಹಾಡು ಬರಲ್ಲ ಅಲ್ವ ಅದಕ್ಕೆ ಹಾಗನ್ನುತ್ತೆ.

ಲೇ.ಕಾ. : ಅಲ್ಲಾರೀ ನಾವೈದು ಜನ ಹೆಂಗಸರಿದ್ದೇವೆ. ನಿಮ್ಮ 'ಪಿಚ್'ನಲ್ಲಿ ಹಾಡಿ ಎಂದರೆ ಹೇಗೆ. ಸರಿ ನಾವು ಲೇಡೀಸ್ ಪಿಚ್‌ಗೆ ಹಾಡ್ತೀವಿ. ನೀವೊಬ್ಬರೇ ತಾನೆ? - ಅಡ್ಜಸ್ಟ್ ಮಾಡ್ಕೊಳ್ಳಿ.

ಸಿದ್ದು : ಆಯ್ತು ಬಿಡಿ ನಂಗೇನೂ ಪ್ರಾಬ್ಲಮ್ ಇಲ್ಲ. ಹಾಡಿರೋದು ಹೇಗೋ ಹಾಗೇ ಹಾಡ್ತಿದ್ದೀನಿ ನಾನು ಅಷ್ಟೇ (ಹಾಡಿನ ಪಿಚ್ ಬದಲಾಯಿಸಿಕೊಂಡೆವು)

ಸಿದ್ದು : ರೀ ಇದು ತುಂಬಾ 'ಲೋ'ಆಗುತ್ತೆ. ಇಲ್ಲಾಂದ್ರೆ ಕೀಂ ಎಂದು ಕಿರುಚಬೇಕು ಇದು ಸರಿ ಇಲ್ಲ ಈ ಪಿಚ್ ಬೇಡವೇ ಬೇಡ.

3ಲೇ.ಕಾ. : ಬೇಡಪ್ಪ ಈಗ ಸರಿಯಾಗಿದೆ. ಈಗ ನಾನು ಕೊಂಯ್ಯಿ ಎಂದು ಕೂಗಬೇಕಾಗಿತ್ತು ಇದೇ ಚೆನ್ನಾಗಿದೆ.

ಸಿದ್ದು : ಅಲ್ಲ ಮೇಡಂ ನಿಮಗೆ ಅರ್ಥಾನೇ ಆಗ್ತಿಲ್ಲ. ಫ.....ಬೇಜಾರು

4 ಲೇ.ಕಾ. : ಸರಿ ಸರಿ ಈಗ ಏನ್ಮಾಡಬೇಕು ಅಂತೀರಿ?

ಸಿದ್ದು : ಹೀಗೆ ಹಾಡಿ ನೀವೆಲ್ಲ (ಹಾಡಿದ)

ಎರಡು ಸಾಲು ಜೊತೆಗೂಡಿಸಿದೆವು. ಮೂರನೇ ಸಾಲು ಇಬ್ಬರು ಕೊಂಯ್ಯಿ ಎಂದೂ ಎತ್ತರದ ದನಿಯಲ್ಲೂ ಮತ್ತೆ ಮೂವರು 'ಲೋ ಎಂದೂ ಕೆಳದನಿಯಲ್ಲೂ ಹಾಡಿದರು ಸಿದ್ದು ಮುಖ ಸಿಂಡರಿಸಿ ಕೊಂಡರು.

ಸಿದ್ದು : ನೀವು ಹೈಯಾಗಿ ಹಾಡಲು ಟ್ರೈ ಮಾಡಬೇಕು. (ಲೇ.ಕಾ. 3, ಲೇ.ಕಾ.5ರ ಪಕ್ಕ ತಿವಿದು - ಅದನ್ನು ಇವರೇ ಮಾಡಬಹುದಿತ್ತಲ್ಲ ಎಂದು ಕುಹುಕಿದಳು)

ಲೇ.ಕಾ.1 : ರೀ ಸಿದ್ದು ನಮಗೆ 'ಓ ರಾಮಕ್ಕ' ಎಂದೇ ಹಾಡಿ ಅಭ್ಯಾಸ.

ಸಿದ್ದು : ಛೆ ಛೆ ಅದು ರಾಮಣ್ಣ ಮೇಡಂ.

ಲೇ.ಕಾ.3 : ರಾಮಕ್ಕ ಅಂದ್ರೆ ಏನು ತಪ್ಪಾಗುತ್ತೆ?

ಸಿದ್ದು : ಆದರೆ 'ರಾಮಣ್ಣ' ಎನ್ನುವುದೇ ಸರಿ ಅಲ್ವ.

ಎಲ್ಲ ಲೇಡೀಸು ಒಟ್ಟಿಗೆ : ಹಾಂ ಯಾಕೆ ಯಾಕೆ? ನಾವೈದು ಜನ, ನೀವೊಬ್ರೇ ನಮಗೆ ರಾಮಕ್ಕ ಎಂದೇ ಹಾಡಿ ಅಭ್ಯಾಸ (ಸಿದ್ಧಲಿಂಗಯ್ಯನವರು ಉದಾರ ಮನಸ್ಸಿನವರು ಎಂದುಕೊಳ್ಳುತ್ತೇವೆ) ನಾವು ಓ ರಾಮಕ್ಕ ಎಂದೇ ಹಾಡುತ್ತೇವೆ. ನೀವು ಛೇಂಜ್ ಮಾಡಿಕೊಳ್ಳಿ.

ಸಿದ್ದು : ಇದು ಸರಿ ಇಲ್ಲ ಮೇಡಂ. ಅದೆಂಗೆ ರಾಮಕ್ಕ ಅಂತ ಹಾಡ್ತೀರಿ. ಒಂಥರಾ 'ಆಡ್' ಅನ್ನುತ್ತೆ. ಓ ರಾಮಣ್ಣ ಅಂದ್ರೆ 'ನಂ' ಅನ್ಸುತ್ತೆ.

ಲೇ.ಕಾ. 4 : ಏನು ಏನು 'ಆಡಾ'? ಯಾವುದ್ರೀ ಆಡು? ನಮಗೆ ಓ ರಾಮಣ್ಣ ಎಂದು ಹಾಡುವುದು 'ಆಡ್' ಅನ್ಸಲ್ಲರೀ. ಮತ್ಯಾಕೆ ರಾಮಕ್ಕ 'ಆಡ್' ಆಗಬೇಕು!

ಸಿದ್ದು : ರಾಮಕ್ಕ ಅಂದ್ರೆ ಬರೀ ಲೇಡೀಸ್ ಆಗ್ತಾರೆ. ಅಲ್ಲ ಮೇಡಂ ರಾಮಣ್ಣ ಅಂದ್ರೆ ಜೆನೆರಲ್ಲು. ಅದಕ್ಕೆ......

*(ನಾವೆಲ್ಲ ಸುಸ್ತು)*

## ದೃಶ್ಯ 2

ಯೂನಿಯನ್ ಎಲೆಕ್ಷನ್; ಎಲ್ಲರಿಗೂ ಟೆನ್ಶನ್; ಯಪ್ಪಾ ಏನ್ ರಾಜಕೀಯ! ಅಧ್ಯಕ್ಷರು, ಉಪಾಧ್ಯಕ್ಷರು, ಸಂಚಾಲಕರು, ಎಕ್ಸಿಕ್ಯುಟಿವ್‌ಗಳು ಎಲ್ಲರಿಗೂ ನಾಮಿನೇಷನ್ ಕರೆಯುವ ಪ್ರೋಗ್ರಾಂ ಶುರು ಆಯಿತು. ಹಿರಿಯ ಯೂನಿಯನ್ ಸದಸ್ಯೆ ಲೇಡೀಸ್‌ಗೆ ಮೀಸಲಾದ ಪೋಸ್ಟ್ ಗೆದ್ದರು. ಯಾವಾಗಲೂ ಅವರೇ ಆ ಪೋಸ್ಟ್‌ನಲ್ಲಿರುತ್ತಾರೆ. ಒಂದಷ್ಟು ಲೇ.ಕಾ.ಗಳಲ್ಲಿ ಗುಸು ಗುಸು ಶುರುವಾಯಿತು. 'ಲಕ್ಷ್ಮೀ ನೀವು ಸೆಕ್ರೆಟರಿ ಪೋಸ್ಟಿಗೆ ಕಂಟೆಸ್ಟ್ ಮಾಡಿ, ನಾವೆಲ್ಲ ಬೆಂಬಲಿಸ್ತೀವಿ. ಅಲ್ಲರೀ ಯಾವಾಗ್ಲೂ ಆ ಮಿಸ್ಟರ್-ರೇ ಸೆಕ್ರೆಟರಿ ಆಗ್ತಾರೆ. ಸ್ವಲ್ಪ ಫೈಟ್ ಆದ್ರೂ ಕೊಡಬೇಕ್ರಿ. ನೀವು ನಿಲ್ಲಿ ನಾನು ಜನಾನ್ನ ಮೊಬಲೈಸ್ ಮಾಡ್ತೀನಿ. 'ಸರಿ ಯಾರಿಗ ಬಾರದು' 'ಅಯ್ಯೋ ಅವರನ್ನು ಎದುರು ಹಾಕ್ಕೊಳಕ್ಕಾಗುತ್ತ' 'ಸೋತರೆ ಅವಮಾನ' 'ಛೆ ಫೈಟ್ ಕೊಟ್ರು ಅಂತ ಹೆಮ್ಮೆ ಪಡಬೇಕು' ಹೀಗೇ ಏನೇನೋ ಮಾತುಗಳು.

ಆ ಹಿರಿಯ ಲೇ.ಕಾ. ಬಂದು ನೀವೆಲ್ಲ ಮಿ...........ಗೇ ವೋಟು ಹಾಕಬೇಕು ಪ್ಲೀಸ್ ಎಂದರು. ಮೇಡಂ ಇಲ್ಲ ಸ್ವಲ್ಪ ಬನ್ನಿ ಎಂದು ನಮ್ಮ ಹೊಸ ಪ್ಲ್ಯಾನ್ ಹೇಳಿದೆವು. ಅವರು ಸೆಟೆದು ನಿಂತು ಕನ್ನಡಕ ಏರಿಸಿ 'ಛೆ ಏನು ಹೇಳಿದ್ದೀರಿ ನೀವು' ನಮಗೆಂದೇ ರಿಸರ್ವ್ ಆಗಿರೋ ಪೋಸ್ಟ್ ಇವೆ. ನಾವೇಕೆ ಬೇರೆ ಕಡೆ ಕಂಟೆಸ್ಟ್ ಮಾಡಬೇಕು" ಎಂದರು. ನಾವೂ ಬಿಡಲಿಲ್ಲ 'ಅಲ್ಲ ಮೇಡಂ, ನಾವ್ಯಾರೂ ಜೆನರಲ್ ಕೆಟೋಗರಿನಲ್ಲಿ ಸ್ಪರ್ಧಿಸಲೇ ಬಾರದ' ಎಂದಾಗ 'ಅಯ್ಯೋ ಅವರೇ ನಮಗೆ ಮೀಸಲು ಸ್ಥಾನ ಕೊಟ್ಟಿದ್ದಾರೆ. ಅದಕ್ಕೆ ಅವರು ಸ್ಪರ್ಧಿಸುತ್ತಾರೆಯೇ? ಹಾಗೇ ನಾವೂ ಎಲ್ಲದಕ್ಕೂ ಕೈ ಹಾಕಬಾರದು. ನಮಗೇ ಸ್ಪೆಷಲ್ ಆಗಿ ಮೀಸಲು ಸ್ಥಾನ ಇರಬೇಕಾದರೆ ಇನ್ನೇನು ಬೇಕು' ಎಂದು ತಿಳುವಳಿಕೆ ಹೇಳಿದರು. ನಾವು ಪೆಚ್ಚು ಮೋರೆ ಹಾಕ್ಕೊಂಡು ಮತ್ತೊಬ್ಬ ಹಿರಿಯ ಕಾಮ್ರೇಡ್ ಮಿ............ಬಳಿ ಹೋಗಿ ನಮ್ಮ ಅಳಲನ್ನು ತೋಡಿಕೊಂಡೆವು.

ಅದಕ್ಕೆ ಅವರೂ ಸಹ 'ನಿಮಗೆ ಅಂತ ಮೀಸಲಾತಿ ಇದ್ದೆಯಲ್ಲ. ನಿಮ್ಮದೇ ರಾಜ್ಯ. ಬೇರೆ ಪೋಸ್ಟ್‌ಗಳನ್ನು 'ಜೆನೆರಲ್ ಕೆಟೋಗರಿ'ನವರು ತೆಗೆದುಕೊಳ್ಳಲಿ. ಹಾಗಾದರೆ ಕಾಮ್ರೇಡ್ ಸಿದ್ದು ಹೇಳಿದ್ದು ಕರೆಕ್ಟ್ : ಜೆಂಟ್ಸ್ ಅಂದ್ರೆ ಜೆನೆರಲ್ಲು. ●

*ರಾಷ್ಟ್ರದ ಕೃಷಿಯೇತರ ಕ್ಷೇತ್ರದಲ್ಲಿ ಶೇ. 20 ರಷ್ಟು ಮಹಿಳೆಯರು ದುಡಿಯುತ್ತಾರೆ. ಕೇಂದ್ರ ಸರ್ಕಾರದ ನೌಕರಿಯಲ್ಲಿ ಶೇ. 7.6 ರಷ್ಟು, ವಾಣಿಜ್ಯ ಕ್ಷೇತ್ರದಲ್ಲಿ ಶೇ. 12.25 ವ್ಯವಸ್ಥಿತ ಕ್ಷೇತ್ರದಲ್ಲಿ ಕೇವಲ ಶೇ. 11 ರಷ್ಟು ಮಹಿಳೆಯರ ಉದ್ಯೋಗದಲ್ಲಿದ್ದಾರೆ.*

*ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.*

*ಸಂ. ಮಂಡಳಿ*

# ಜಾಗತೀಕರಣ ಮಹಿಳಾ ಜಾಗೃತಿಯ ದೃಷ್ಟಿಕೋನ

ಇಂದಿನ ಸಂದರ್ಭದಲ್ಲಿ ಜಾಗತೀಕರಣ ಹಲವಾರು ಚರ್ಚೆಗಳ ಕೇಂದ್ರಬಿಂದುವಾಗುತ್ತಿದೆ. ಕೆಲವು ವರ್ಷಗಳ ಹಿಂದೆ, ಜಾಗತೀಕರಣದ ಪ್ರಕ್ರಿಯೆ ಗ್ಯಾಟ್, ಡಂಕೆಲ್‌ಗಳಂತಹ ಒಪ್ಪಂದಗಳ ಮೂಲಕ, WTO ಮೂಲಕ, ರಭಸದಲ್ಲಿ ಜಾರಿಯಾಗಲು ಪ್ರಾರಂಭಿಸಿದಾಗ, ಜನಸಾಮಾನ್ಯರಿಗೆ ಅದರ ಪರಿಣಾಮಗಳ ಬಗ್ಗೆ ಅದ್ಭುತ, ರಮ್ಯ ಕಲ್ಪನೆ ಕಟ್ಟಿಕೊಡಲಾಗಿತ್ತು. ಆ ಸಂದರ್ಭದಲ್ಲಿ ಸರ್ಕಾರದ ನೀತಿಯ ವಿರುದ್ಧ ಅಲ್ಲಲ್ಲಿ ಪ್ರಗತಿಪರರಿಂದ ನಡೆದ ಕೆಲವು ಪ್ರತಿಭಟನೆಗಳು, ಜನರ ಕಣ್ಣಿನ ಮುಂದೆ ಮೂಡಿಸಲಾಗಿದ್ದ 'ಸುಂದರ, ಸುಖಮಯ, ಜಾಗತಿಕ ಹಳ್ಳಿ'ಯ ಭ್ರಮೆಯನ್ನು ತೂರಿ ಒಳಹೋಗಲು ಶಕ್ತವಾಗಲಿಲ್ಲ.

ಆದರೆ ಇಂದು ಎಲ್ಲವೂ ನಿಚ್ಚಳ. ಪ್ರತಿಯೊಬ್ಬರು ಜಾಗತೀಕರಣದ ಪರಿಣಾಮಗಳನ್ನು ನೋಡುವುದಷ್ಟೇ ಅಲ್ಲ, ಸ್ವತಃ ಅನುಭವಿಸುತ್ತಿದ್ದಾರೆ. ಮಹಿಳೆಯರ ವಿಷಯದಲ್ಲಂತೂ ಈ ಮಾತು ನೂರಕ್ಕೆ ನೂರರಷ್ಟು ಸತ್ಯ. ಈ ದಶಕದಲ್ಲಿ ಮಹಿಳೆಯರ ಸಾಮಾಜಿಕ ಆರ್ಥಿಕ ಸ್ಥಿತಿ ಸಂಪೂರ್ಣವಾಗಿ ಹದಗೆಟ್ಟಿದೆ.

ಮೊದಲೇ ಮಹಿಳೆಯರಿಗೆ ನೂರಾರು ಕಟ್ಟುಪಾಡು, 'ಆದರ್ಶ'ಗಳನ್ನು ವಿಧಿಸಿ, ದಮನಿಸಿಟ್ಟುಕೊಂಡಿದ್ದ ಊಳಿಗಮಾನ್ಯ ಪುರುಷಾಧಿಪತ್ಯದ ಮೌಲ್ಯಗಳ ಜೊತೆಗೆ ಈಗ, ಸಾಮ್ರಾಜ್ಯಶಾಹಿಯ ಸರಕು ಸಂಸ್ಕೃತಿಯೂ ಸೇರಿಕೊಂಡಿದೆ. ಈ ಭರಾಟೆಯಲ್ಲಿ ಉಪಭೋಗ ಸಂಸ್ಕೃತಿಯ ಭ್ರಮಗೆ ತಕ್ಕಂತೆ ಜೀವಿಸಲು, ಇಂದಿನ ಯುವಕರು ವರದಕ್ಷಿಣೆಯನ್ನು, ದಿಢೀರ್ ಹಣ ಒದಗಿಸುವ ಸಾಧನವಾಗಿ ಪರಿಗಣಿಸುತ್ತಿದ್ದಾರೆ. ಹಿಂದಿನ ಊಳಿಗಮಾನ್ಯ ಮೌಲ್ಯಗಳಲ್ಲಿ ಮಹಿಳೆ 'ಅಲಂಕಾರದ ಬೊಂಬೆ'ಯಾದರೆ, ಇಂದು ಅವಳು 'ಮಾರಾಟಕ್ಕಿಟ್ಟಿರುವ ಸರಕೂ' ಸಹ ಆಗಿದ್ದಾಳೆ. ಅವಳಿಗೆ ಸಮಾಜದಲ್ಲಿರುವ ಬೆಲೆ ಇಷ್ಟು. ಯುವಜನರನ್ನು ಹಾದಿತಪ್ಪಿಸುವ ಅಶ್ಲೀಲ ಚಲನಚಿತ್ರಗಳು, ಬ್ಲೂಫಿಲಂಗಳು ಒಂದೆಡೆಯಾದರೆ, ಆಧುನಿಕತೆಯೆಂದರೆ ಕಡಿಮೆ ಉಡುಪು ತೊಡುವುದು ಎಂಬಂತೆ ಚಿತ್ರಿಸುವ ಟಿ. ವಿ. ಚಾನಲ್‌ಗಳು ಇನ್ನೊಂದೆಡೆ. ಇವುಗಳ ನಡುವೆ, ಜಾಹೀರಾತುಗಳು ಮಹಿಳೆಯರನ್ನು ಬಿಂಬಿಸುವ ರೀತಿಯನ್ನಂತೂ ವರ್ಣಿಸಲು ಸಾಧ್ಯವಿಲ್ಲ. ಅವುಗಳಲ್ಲಿ ರೂಪದರ್ಶಿ, ತಾನು ಪ್ರಚಾರ ಮಾಡುತ್ತಿರುವ ವಸ್ತುವಿಗಿಂತ ಕಡಿಮೆ ಮೌಲ್ಯವುಳ್ಳವಳಾಗಿ, ಭೋಗದ ಸರಕಾಗಿ ಚಿತ್ರಿಸಲ್ಪಟ್ಟಿರುತ್ತಾಳೆ. ಇವೆಲ್ಲವೂ ಮಹಿಳೆಯರ ಜೀವಕ್ಕೆ ಬಿಡಿಗಾಸಿನ ಬೆಲೆ ಇಲ್ಲದಂತೆ ಮಾಡಿವೆ.

ಇಷ್ಟೆಲ್ಲದರ ನಡುವೆಯೂ, ಎರಡು ಹೊತ್ತಿನ ಕೂಳಿಗಾಗಿ ಕಷ್ಟಪಟ್ಟು ದುಡಿಯುವ ಮಹಿಳೆಯರಿಗೆ, ಹಿಂಸೆಯಿಂದ ತಪ್ಪಿಸಿಕೊಂಡು ಸ್ವತಂತ್ರವಾಗಿ ಬದುಕಬೇಕೆಂದುಕೊಂಡವರಿಗೆ, ವೈಚಾರಿಕ ಸ್ವಾತಂತ್ರ್ಯ ಬಯಸುವವರಿಗೆ ಸಹಾಯಕವಾಗಿದ್ದ, ಔದ್ಯೋಗಿಕ ಆಧಾರ ಇಂದು ಕುಸಿದು ಬೀಳುತ್ತಿದೆ. ಜಾಗತೀಕರಣದ ಭಾಗವಾಗಿ ಬರುತ್ತಿರುವ 'ಕೃಷಿ ನೀತಿ'ಗಳು ಶೇ. 70ರಷ್ಟಿರುವ ರೈತ ಮಹಿಳೆಯರನ್ನು ಭೂಮಿಯಿಂದ ಹೊರದೂಡುತ್ತಿವೆ. ಕಾರ್ಮಿಕರ ವೀರೋಚಿತ ಹೋರಾಟಗಳಿಂದ ಅವರಿಗೆ ದೊರೆತಿದ್ದ ಅಲ್ಪಸ್ವಲ್ಪ ಸೌಲಭ್ಯಗಳೂ, ಹೊಸ ಕಾರ್ಮಿಕ ನೀತಿಗಳು ಮತ್ತು ಹಳೇ ನೀತಿಗಳ ತಿದ್ದುಪಡಿಯ ಹೆಸರಿನಲ್ಲಿ ಮಾಯವಾಗುತ್ತಿವೆ. ಆಮದು-ರಫ್ತುಗಳ ಸ್ವರೂಪವನ್ನೇ ಬದಲಾಯಿಸಿರುವ ಹೊಸ ಆರ್ಥಿಕ ನೀತಿಗಳು ಬಡದೇಶಗಳ ಜನರ ಕೊರಳಿಗೆ ಉರುಳು ಬಿಗಿದಿವೆ. ಈ ಶ್ರೇಣಿಯಲ್ಲಿ ಕಟ್ಟಕಡೆಯ ಮೆಟ್ಟಿಲಾಗಿರುವ ಕೆಳಜಾತಿಯ ಬಡ ಮಹಿಳಾ ಕೆಲಸಗಾರರಿಗೆ ನ್ಯಾಯವಾಗಿ ದೊರೆಯಬೇಕಿದ್ದ ಪ್ರತಿಫಲ, 'ರಿಯಾಯಿತಿ'ಗೆಂದು ಆಳುವವರಿಂದ ಕರೆಸಿಕೊಂಡು, ಬಹುರಾಷ್ಟ್ರೀಯ ಕಂಪನಿಗಳ ಪಾಲಾಗುತ್ತಿವೆ. ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳೆರಡರಲ್ಲೂ ಸರ್ಕಾರ ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚುವುದರಿಂದ ಮೊದಲು ಕೆಲಸ ಕಳೆದುಕೊಳ್ಳುತ್ತಿರುವವರು ಮಹಿಳೆಯರೇ ಆಗಿದ್ದಾರೆ. ಸಂಘಟಿತ ಕ್ಷೇತ್ರದ ಮಹಿಳಾ ಕಾರ್ಮಿಕರು, 'ಸ್ವಯಂ ನಿವೃತ್ತಿ' ಯೋಜನೆ, ರಾತ್ರಿ ಪಾಳಿಗಳಲ್ಲಿ ಕೆಲಸ, ವರ್ಗಾವಣೆ ಮೊದಲಾದ ಒತ್ತಡಗಳಿಗೆ ಸಿಲುಕಿದ್ದಾರೆ. ಎಲ್ಲಕ್ಕಿಂತ ಅತಂತ್ರ ಸ್ಥಿತಿಯಲ್ಲಿರುವವರು ಅಸಂಘಟಿತ ಮತ್ತು ಸೇವಾ ಕ್ಷೇತ್ರಗಳ ಮಹಿಳಾ ಕಾರ್ಮಿಕರು. ಖಾಸಗೀಕರಣದ ಕತ್ತಿ ತಲೇ ಮೇಲೆ ತೂಗಾಡುತ್ತಾ, ಇವರ ಪ್ರತೀಕ್ಷಣದ ಬದುಕನ್ನು ಅಸಹನೀಯಗೊಳಿಸಿದೆ.

ಈ ಎಲ್ಲಾ ಪರಿಣಾಮಗಳ ಮೂಲದಲ್ಲಿರುವುದು ಜಾಗತೀಕರಣವೆಂಬುದು ಸ್ಪಷ್ಟವಾಗಿದ್ದರೂ, ಒಟ್ಟಾರೆ ಜಾಗತೀಕರಣವನ್ನೇ ಪ್ರಪಂಚ ಮಟ್ಟದಲ್ಲಿ ಈಗ ನಡೆಯುತ್ತಿರುವ ಸಂಘಟಿತ ಪ್ರಕ್ರಿಯೆಗಳಿಂದ ಪ್ರತ್ಯೇಕಿಸಿ ನೋಡುವುದು ಸರಿಯಲ್ಲ.

ದುರ್ಬಲ ರಾಷ್ಟ್ರಗಳ ಎಲ್ಲಾ ಥರದ ಸಂಪತ್ತು ಮತ್ತು ಮಾರುಕಟ್ಟೆಯ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಬೇಕೆನ್ನುವ ಸಾಮ್ರಾಜ್ಯಶಾಹಿಗಳ ದೀರ್ಘಕಾಲೀನ ಯೋಜನೆಯ ಅಂಗವಾಗಿಯೇ ಇದೆಲ್ಲವೂ ನಡೆಯುತ್ತಿದೆ. ಇದಕ್ಕೆ ಇಲ್ಲಿನ ಆಳುವವರಿಂದ ಯಾವುದೇ ರೀತಿಯ ವಿರೋಧವನ್ನೂ ನಿರೀಕ್ಷಿಸಲು ಸಾಧ್ಯವಿಲ್ಲ. ಉದಾಹರಣೆಗೆ, ವಿದೇಶೀ ದೊರೆಗಳ ಆಜ್ಞೆಯಂತೆ ಇದೇ ಏಪ್ರಿಲ್ 1, 2001 ರಿಂದ 700 ಕ್ಕಿಂತ ಹೆಚ್ಚು ವಿದೇಶೀ ವಸ್ತುಗಳ ಮೇಲಿನ ಆಮದು ಸುಂಕವನ್ನು ರದ್ದುಗೊಳಿಸಲಾಗುತ್ತಿದೆ; ಇಲ್ಲಿನ ಬಜೆಟ್ ಮೊದಲು ಅಮೇರಿಕಾದ ಸಂಸತ್ತಿನಲ್ಲಿ ಪ್ರಸ್ತಾಪಗೊಳ್ಳುತ್ತದೆ. ಇಂತಹ ಜನವಿರೋಧಿ ಆಳುವವರ ಮೇಲೆ ಜನರ ಅತೀವ ಒತ್ತಡ ಇಲ್ಲದಿದ್ದರೆ, ಭಾರತವೂ ಸದ್ಯದಲ್ಲೇ, ಸೋಮಾಲಿಯಾ ಸೂಡಾನ್‌ಗಳಂತಹ ದುರದೃಷ್ಟಕರ ಸ್ಥಿತಿಯನ್ನೂ ತಲುಪಬೇಕಾಗುತ್ತದೆ.

ಆದ್ದರಿಂದ ನಾಡಿನ, ಜನರ ಸ್ವಾಯತ್ತತೆಯನ್ನು ಬಯಸುವ ಯಾರೇ ಆದರೂ ಪ್ರಬಲ ಹೋರಾಟವೊಂದನ್ನೇ ಉಳಿವಿನ ಹಾದಿಯಾಗಿ ಆರಿಸಲು ಸಾಧ್ಯ. ಜಾಗತೀಕರಣದಂಥ ವಿನಾಶಕಾರೀ ನೀತಿಗಳಿಗೆ ಪ್ರಬಲ ತಡೆಯನ್ನು ಒಡ್ಡುವಂತೆ, ಮಹಿಳೆಯರಲ್ಲಿ, ಜನರಲ್ಲಿ ಜಾಗೃತಿ ಮೂಡಿಸುವುದು, ಅವರನ್ನು ಸಂಘಟಿಸುವುದು ಅನಿವಾರ್ಯವಾಗಿದೆ. ಮಹಿಳಾ ಜಾಗೃತಿಯ ಗುರಿಯೂ ಕೂಡ ಅದೇ. ಈ ನಿಟ್ಟಿನಲ್ಲಿ ಪ್ರಪಂಚದೆಲ್ಲೆಡೆ ನಡೆಯುತ್ತಿರುವ ಉಜ್ವಲ ಮಹಿಳಾ ಹೋರಾಟಗಳು ನಿಮಗೂ ನಮಗೂ ಸ್ಫೂರ್ತಿಯಾಗಲಿ ಎಂಬ ಹಾರೈಕೆಯೊಂದಿಗೆ.

*- ಮಹಿಳಾ ಜಾಗೃತಿ*

---

## 'ಪ್ಲೇವಿಯಾರವರ ಬದುಕು ಮತ್ತು ಹೋರಾಟ'

**ನ**ಮ್ಮ ದೇಶದಲ್ಲಿ ಕೌಟುಂಬಿಕ ಜೀವನದ ರೀತಿ ನೀತಿಗಳು ಮಹಿಳೆಯ ತುಳಿತಕ್ಕೆ ಪ್ರೋತ್ಸಾಹ ನೀಡುತ್ತವೆ. ನೆಲಮನೆ ತಿಂಗಳ ಮಾಲಿಕೆ-3ರಲ್ಲಿ ನನ್ನ ಕತೆ ನಮ್ಮ ಕತೆಯಲ್ಲಿ ಪ್ಲೇವಿಯಾರವರ ಕೌಟುಂಬಿಕ ಜೀವನದ ಸಮಸ್ಯೆಗಳು ತಿಳಿದುಬರುತ್ತದೆ. ಇಂತಹ ಅಮಾನವೀಯ ಕೃತ್ಯಗಳಿಗೆ ಮಹಿಳೆಯರ ಜೀವನವನ್ನು ಅಪಮೌಲ್ಯಗೊಳಿಸುತ್ತಿರುವುದೆ ಕಾರಣ. ಭಾರತದ ಮಹಿಳೆಯರ ಜೀವನದಲ್ಲಿ ಬದಲಾವಣೆ ತರುವ ಬಗ್ಗೆ ನಾವು ಏನೇ ಚಿಂತಿಸಿದರೂ ಪ್ರಯತ್ನಿಸಿದರೂ ಅದು ನಗರದ ಮಧ್ಯಮ ವರ್ಗದ ಶಿಕ್ಷಿತ ಮಹಿಳೆಯರಿಗೆ ಮಾತ್ರ ಸೀಮಿತವಾಗಿರುತ್ತದೆ. ಹಾಗಂತ ಅವರ ಸಮಸ್ಯೆಗಳು ಮತ್ತು ಹೋರಾಟಗಳು ಅಮೂಲ್ಯವಾದವಲ್ಲ ಎಂದಲ್ಲ ಅವರ ಹೋರಾಟಕ್ಕೆ ಸಾಧನೆಗೆ ಸ್ವಲ್ಪಮಟ್ಟಿಗೆ ಪ್ರಾಮುಖ್ಯತೆ ಸಿಕ್ಕಿದೆ. ಆದರೆ ಉಳಿದ ಲಕ್ಷಾಂತರ ಮಹಿಳೆಯರನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗಿದೆ. ಆದುದರಿಂದ ಈ ನಿಟ್ಟಿನಲ್ಲಿ ಬಡಮಹಿಳೆಯರ ಅದರಲ್ಲೂ ಗ್ರಾಮೀಣ ಮಹಿಳೆಯರ ಬಗ್ಗೆ ಸಂಗ್ರಹಿಸಿ ಅವರ ಬಗ್ಗೆ ಅಧ್ಯಯನ ನಡೆಸುವುದು ತುಂಬ ಅಗತ್ಯವಾಗಿದೆ. ಹೀಗೆ ಮಹಿಳೆಯರ ವಿರುದ್ಧ ನಡೆಯುತ್ತಿರುವ ದೌರ್ಜನ್ಯಗಳಿಗೆ ಕಾರಣಗಳು ಹಲವಾರು. ಅಪರಾಧಿಗಳಿಗೆ ಕಾನೂನು ಕಠಿಣ ಶಿಕ್ಷೆಯನ್ನು ವಿಧಿಸದೆ ಇರುವುದು ಒಂದೆಡೆಯಾದರೆ, ಮತ್ತೊಂದೆಡೆ ಮಹಿಳೆಯನ್ನು ಕುರಿತ ಸಮಾಜದ ನಕಾರಾತ್ಮಕ ದೃಷ್ಟಿಕೋನವೂ ಇದಕ್ಕೆ ಕಾರಣವಾಗಿದೆ. ಶತಮಾನಗಳಿಂದ ನಡೆದು ಬಂದಿರುವ ಸ್ತ್ರೀವಿರೋಧಿ ಅನ್ಯಾಯಗಳನ್ನು ಬಹಳ ಹಗುರವಾಗಿ ಪರಿಗಣಿಸುವ ಧೋರಣೆ ಮಹಿಳೆಯರ ಮೇಲಿನ ದೌರ್ಜನ್ಯ ನಾನಾ ರೂಪಗಳಲ್ಲಿ ವ್ಯಕ್ತವಾಗುತ್ತಿವೆ. ಇದರಲ್ಲಿ ಹಲವು ದೇಹದ ಮೇಲಾಗುವ ದೌರ್ಜನ್ಯಗಳಾದರೆ ಮತ್ತೆ ಹಲವು ಆಕೆಯನ್ನು ಮಾನಸಿಕ ಹಿಂಸೆಗೆ ಗುರಿಪಡಿಸುವಂಥವು. ಕುಟುಂಬದೊಳಗೆ ಹೆಂಗಸರ ಸ್ಥಾನ ಬಲಗೊಳ್ಳದ ಹೊರತು, ಕುಟುಂಬದ ಗಂಡಸರು ಹೆಂಗಸರನ್ನು ಸಮಾನರೆಂದು ಕಾಣದ ಹೊರತು, ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಪ್ರಬಲವಾಗದು. ಹಾಗೆಯೆ ಎಲ್ಲಿಯವರೆಗೆ ಸಮಾಜದಲ್ಲಿ ಲಿಂಗ ಅಸಮಾನತೆಯ ಬೇರುಗಳು ಇರುತ್ತವೆಯೋ ಅಲ್ಲಿಯವರೆಗೂ ಈ ಅಸಮಾನತೆಯನ್ನು ಕಿತ್ತೊಗೆಯಲು ನಿರಂತರ ಹೋರಾಟ ನಡೆಯುತ್ತಲೇ ಇರಬೇಕಾಗಿದೆ. ಆದುದರಿಂದ ಇಂದಿನ ಸಮಾಜದ ಬಹು ಮೂಲಭೂತವೆನಿಸುವ ಅಗತ್ಯಗಳಲ್ಲಿ ಮಹಿಳಾ ಚಳುವಳಿಯು ಒಂದು ಎಂಬುದು ನಿಸ್ಸಂದೇಹ.

❑ *ಡಿ. ಮೂರ್ತಿ, ಮೈಸೂರು*

# ಆದಿವಾಸಿಗಳ ಮಾನವ ಹಕ್ಕುಗಳ ಉಲ್ಲಂಘನೆ : ಒಂದು ವರದಿ

ಮಹಾರಾಷ್ಟ್ರದ ಅಹಮದಾನಗರದ ಪುನ್‌ತಾಂಬ ಗ್ರಾಮದಲ್ಲಿ ಆದಿವಾಸಿಗಳ ಮಾನವ ಹಕ್ಕುಗಳ ಉಲ್ಲಂಘನೆ ಆಗಿದೆ ಎಂದು ಇತ್ತೀಚೆಗೆ ಭೇಟಿ ನೀಡಿದ ಸಮಾಜ ಕಾರ್ಯಕರ್ತರು, ವಕೀಲರು ಮತ್ತು ಪತ್ರಕರ್ತರ ಗುಂಪು ತಿಳಿಸಿದೆ. ಜೂನ್ 25, 2001ರಂದು ಪೊಲೀಸರ ಗುಂಡುಗಳಿಗೆ ಮೂವರು ಮಂದಿ ಬಲಿಯಾಗಿರುವ ಸುದ್ದಿ ರುಜುವಾತಾಗಿದೆ. ಬಲಿಯಾಗಿದ್ದವರಲ್ಲಿ ಪ್ರದೀಪ್ ದುಶಿಂಗ್(36), ಇಂದುಬಾಯಿ ಮಂಜ್ರೆ(45) ಸ್ಥಳದಲ್ಲೇ ಮೃತಪಟ್ಟು ಮತ್ತೊರ್ವ ಮಹಿಳೆ ಪುಣೆಯ ಆಸ್ಪತ್ರೆಯಲ್ಲಿ ಮರಣ ಹೊಂದಿದ್ದಾಳೆ. ಮತ್ತಿಬ್ಬರು ಮಹಿಳೆಯರು ಗುಂಡೇಟಿನಿಂದ ಗಾಯಗೊಂಡ ಪುಣೆಯ ಸಸ್ಸೂನ್ಸ್ ಆಸ್ಪತ್ರೆಯಲ್ಲಿ ಬದುಕಿ ಉಳಿಯಲು ಹೋರಾಟ ನಡೆಸುತ್ತಿದ್ದಾರೆ.

ಪುನ್‌ತಾಂಬ ಗ್ರಾಮದಲ್ಲಿ ಆದಿವಾಸಿಗಳ ಗುಂಪೊಂದು ಪೊಲೀಸ್ ಠಾಣೆ ಎದುರು ಗಲಭೆ ನಡೆಸಿದಾಗ ಗುಂಡು ಹಾರಿಸಲೇ ಬೇಕಾಯಿತು ಎಂದು ಪೊಲೀಸರು ಹೇಳಿಕೆ ನೀಡಿದ್ದಾರೆ. ಕಾಂಗ್ರೆಸ್ ಕಾರ್ಯಕರ್ತನಾದ ಬಾಬಾ ಸಾಹೇಬ್ ಚವ್ಹಾಣ್(36) ಆದಿವಾಸಿ ಜನಾಂಗದ ಎಳೆ ಬಾಲಕಿಯೊಬ್ಬಳ ಮೇಲೆ ಲೈಂಗಿಕ ಅತ್ಯಾಚಾರ ಎಸಗಿದ ಅಪರಾಧಕ್ಕಾಗಿ ಆತನನ್ನು ಪುನಃ ಬಂಧನಗೊಳಿಸಲು ಆದಿವಾಸಿಗಳ ಗುಂಪು ಒತ್ತಾಯ ತರುತ್ತಿದ್ದರು.

ಜಾಮೀನಿನ ಮೇಲೆ ಬಿಡಬಹುದಾದಂತಹ ಅಪರಾಧದ ಅಡಿಯಲ್ಲಿ ಈತನ ಅಪರಾಧ ದಾಖಲಾದ್ದರಿಂದ ಈತನು ಬಂಧನಕ್ಕೆ ಒಳಪಟ್ಟು ಕೆಲವು ದಿನಗಳ ಹಿಂದೆ ಜಾಮೀನಿನ ಮೇಲೆ ಬಿಡುಗಡೆಯಾಗಿರುವನು ಎಂದು ಪೊಲೀಸರು ಹೇಳುತ್ತಿದ್ದಾರೆ. ಆದರೆ ಸ್ಥಳೀಯ ಜನ ಸಮುದಾಯವು ಆತ ಎಸಗಿದ ಅಪರಾಧವನ್ನು, ಲೈಂಗಿಕ ಅತ್ಯಾಚಾರದ ಅಡಿಯಲ್ಲಿ ದಾಖಲಿಸಿದ್ದಲ್ಲಿ ಬಲವಾದ ಶಿಕ್ಷೆ ವಿಧಿಸಬಹುದಿತ್ತು ಎಂದಿದ್ದಾರೆ.

ಆದಿವಾಸಿಗಳು ಹರಿತವಾದ ಚಾಕು, ಕೊಡಲಿ, ಮಚ್ಚು ಮುಂತಾದ ಮಾರಕ ಅಸ್ತ್ರಗಳಿಂದ ಪೊಲೀಸರ ಮೇಲೆ ಹಲ್ಲೆ ನಡೆಸಿದ್ದಾರೆ ಎಂದು ಪೊಲೀಸರು ಹೇಳಿಕೆ ನೀಡಿದ್ದಾರೆ. ಆದರೆ ಈ ಹೇಳಿಕೆಗೆ ಹುರುಳಿಲ್ಲ. ಈ ಗಲಭೆಯಲ್ಲಿ ಮೃತಪಟ್ಟ ಪ್ರದೀಪನ ತಂದೆ ಸಂಪತ್‌ವಾಮನ್ ದುಶಿಂಗ್(ನಿವೃತ್ತ ಶಾಲಾ ಉಪಾಧ್ಯಾಯ). ತನ್ನ ಮಗನನ್ನು ಕೊಲ್ಲಲು ಈ ರೀತಿ ಹೊಂಚು ಹಾಕಿದ್ದಾರೆ ಎಂದು ಹೇಳಿದ್ದಾರೆ. ಪ್ರದೀಪನು ಆದಿವಾಸಿಗಳ ಭೂ ಹಕ್ಕುಗಳ ಹೋರಾಟದಲ್ಲಿ ಸಕ್ರಿಯವಾಗಿ ಪಾಲುಗೊಂಡಿದ್ದ.

ಪ್ರದೀಪನನ್ನು ಪೊಲೀಸ್ ಔಟ್‌ಪೋಸ್ಟ್‌ನಿಂದ 300 ಅಡಿ ದೂರವಿರುವ ಶಾಲಾ ಆವರಣದಲ್ಲಿ ಗುಂಡಿಟ್ಟು ಕೊಂದಿದ್ದಾರೆ. ಶಾಲೆಯ ಗೋಡೆಯ ಮೇಲೆ ಕಾಣಸಿಗುವ ಗುಂಡೇಟಿನ ಗುರುತುಗಳು ಇದಕ್ಕೆ ಸಾಕ್ಷಿಯಾಗಿವೆ. ಇದರಿಂದ ಪ್ರತಿಭಟಿಸುತ್ತಿದ್ದ ಆದಿವಾಸಿಗಳನ್ನು ಅಟ್ಟಿಸಿಕೊಂಡು ಹೋಗಿರುವುದು ವ್ಯಕ್ತವಾಗುತ್ತದೆ ಎಂದು ಪ್ರತ್ಯಕ್ಷ ಸಾಕ್ಷಿಗಳು ಹೇಳಿಕೆ ನೀಡಿದ್ದಾರೆ.

ಆದಿವಾಸಿ ಭೂ ಹಕ್ಕುಗಳ ಹೋರಾಟದಲ್ಲಿ ಕಾರ್ಯ ನಿರತರಾಗಿರುವ ಸಂಘಟನೆ 'ಒಂದರಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಮತ್ತೊಬ್ಬ ಕಾರ್ಯಕರ್ತೆ ಇಂದುಬಾಯಿ ಮಂಜ್ರಿ ಕೂಡ ಇಲ್ಲಿ ಹತ್ಯೆಗೆ ಒಳಗಾಗಿರುವುದು ಪೊಲೀಸರನ್ನು ಸಂಶಯದಿಂದ ನೋಡಬೇಕಾಗುತ್ತದೆ. ಆದಿವಾಸಿ ಭೂ ಹಕ್ಕುಗಳ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದ ಇಬ್ಬರೂ ಹತ್ಯೆಗೆ ಒಳಪಟ್ಟಿರುವುದು ಅತ್ಯಂತ ಕಾಕತಾಳೀಯ ಎಂದಿದ್ದಾರೆ ಸ್ಥಳೀಯರು.

ಪುನ್‌ತಾಂಬ ಪೊಲೀಸ್ ಔಟ್ ಪೋಸ್ಟಿನ ಸಬ್ ಇನ್ಸ್‌ಪೆಕ್ಟರ್ ಗೋವಿಂದ ಮಾಲಿ ಮತ್ತು ಸ್ಥಳೀಯ ತಹಸಿಲ್‌ದಾರ್ ಮಾವಶಿ ಇಬ್ಬರು ಸೇರಿ ಕೊಂದು ಈ ಒಳಸಂಚು ನಡೆಸಿ ಅವರಿಬ್ಬರ ಮೇಲೆ ಈ ಗುರಿ ಇಟ್ಟಿದ್ದಾರೆ ಎಂದು ಪ್ರತ್ಯಕ್ಷ ಸಾಕ್ಷಿಗಳು ಹೇಳಿಕೆ ನೀಡಿದ್ದಾರೆ. ಭೂ ಮಾಲೀಕರಿಗೆ ಸಹಾಯ ಹಸ್ತ ನೀಡಲೂ ಸಹ ತಮ್ಮನ್ನು ಹೆದರಿಸುತ್ತಿದ್ದಾರೆ ಎಂದು ಮೆಶಿಂಗ್ ಹಲವಾರು ಬಾರಿ ದೂರು ದಾಖಲು ಮಾಡಿದ್ದಾರೆ ಎಂದು ಸ್ಥಳೀಯ ಜನ ಸಮುದಾಯ ಹೇಳಿಕೆ ನೀಡಿದ್ದಾರೆ.

ಗೋವಿಂದ ಮಾಲಿಯು ಹಲವಾರು ವರ್ಷಗಳಿಂದ ಪುನ್‌ತಾಂಬದ ಔಟ್ ಪೋಸ್ಟಿನ ಠಾಣೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾನೆ. ಯಾವುದೇ ರೀತಿಯ ಹೇಳಿಕೆ ಸಲ್ಲಿಸಲು ಆತ ಮತ್ತು ತಹಸಿಲ್ದಾರ ಅಲ್ಲಿರಲಿಲ್ಲ. ಈ ಸಂದರ್ಭದಲ್ಲಿ ಪೊಲೀಸರು 16 ಜನರನ್ನು ಬಂಧಿಸಿದ್ದಾರೆ. ಇದರಲ್ಲಿ ಮೂವರು ಮಹಿಳೆಯರಿದ್ದಾರೆ. ಡೆಪ್ಯೂಟಿ ಮುಖ್ಯಮಂತ್ರಿಗಳು ರೂ. 2 ಲಕ್ಷ ನೀಡುವಂತೆ ಘೋಷಿಸಿದ್ದಾರೆ.

ಮ್ಯಾಜಿಸ್ಟ್ರೀರಿಯಲ್ ವಿಚಾರಣೆ ಸರ್ಕಾರ ನಡೆಸುತ್ತದೆ. ಆದರೆ ಅದು ಅಧೀನವಲ್ಲದ ಸಮಿತಿಯಾಗಿದ್ದರಿಂದ ಈ ಘಟನೆಯನ್ನು ನ್ಯಾಯಾಂಗ ತನಿಖೆ ನಡೆಸುವ ತುರ್ತು ಅವಶ್ಯಕತೆ ಇದೆ. ಇತರೆ ಆದಿವಾಸಿಗಳ ಜೊತೆಯಲ್ಲಿ ಜಾನ್ ಅಬ್ರಾಹಮ್ ಮತ್ತು ರೀನಾ (ಆತನ ಪತ್ನಿ) ಕೂಡ ಪೊಲೀಸರ ವಶದಲ್ಲಿದ್ದಾರೆ. ಸುಳ್ಳು ಆರೋಪಗಳ ಸರಮಾಲೆಯನ್ನು ಹೊರಿಸಿ ಅವರನ್ನು ಘನ ಸರ್ಕಾರವು ನಕ್ಸಲೀಯರು ಎಂದು ದೋಷಾರೋಪಣೆ ಮಾಡಲು ಸರ್ವ ಸಿದ್ಧತೆ ನಡೆಸುತ್ತಿದೆ. ಪೊಲೀಸ್ ಠಾಣೆಯನ್ನು ಸುಟ್ಟು, ಪೊಲೀಸರನ್ನು ಹತ್ಯೆಗೈಯ್ಯುವ ಕಾರ್ಯ ಎಸಗಲು ಪ್ರಯತ್ನಿಸಿದರು. ಸುಳ್ಳು ಆರೋಪ IPC ಸೆಕ್ಷನ್ 360ರ ಅಡಿಯಲ್ಲಿ ಅಪರಾಧವನ್ನು ದಾಖಲಿಸಿದ್ದಾರೆ. ಸ್ಥಳೀಯ ಜನ ಸಮುದಾಯ ಈ ಘಟನೆಯಿಂದ ಭಯಭೀತರಾಗಿದ್ದಾರೆ. ಗುಂಡೇಟಿನಿಂದ ಹಲವಾರು ಜನ ಗಾಯಗೊಂಡಿದ್ದರೂ ಸಹ ವೈದ್ಯಕೀಯ ಚಿಕಿತ್ಸೆ ಪಡೆಯಲು ಹೆದರಿದ್ದಾರೆ ಎಂದು ಸ್ಥಳೀಯ ಜನ ವರದಿ ಮಾಡಿದ್ದಾರೆ.

**ತುರ್ತು ಮಾಡಲೇಬೇಕಾದ ಕೆಲವು ಕಾರ್ಯಗಳು:**

(1) ಜೂನ್ 25, 2001ರಂದು ನಡೆದ ಪೊಲೀಸ್ ಗುಂಡಾಟಕ್ಕೆ ನ್ಯಾಯಾಂಗ ತನಿಖೆ ನಡೆಸುವುದು. ತನಿಖೆಯ ಮುಖ್ಯಸ್ಥರಾಗಿ ನ್ಯಾಯಾಧೀಶರನ್ನು ನೇಮಿಸಬೇಕೇ ಹೊರತು ಸರ್ಕಾರಿ ಅಧಿಕಾರಿಯನ್ನಲ್ಲ. ಪೊಲೀಸರ ದೌರ್ಜನ್ಯದ ವಿರುದ್ಧ FIR (ಪ್ರಾಥಮಿಕ ವಿಚಾರಣಾ ವರದಿ) ದಾಖಲಿಸುವುದು.

(2) ನಿಶ್ಶಸ್ತ್ರರಾದ ಮೂವರನ್ನು ಗುಂಡಿಟ್ಟು ಕೊಂದ ಪೊಲೀಸ್ ಅಧಿಕಾರಿಗಳನ್ನು ತಕ್ಷಣವೇ ಅಮಾನತ್ತು ಮಾಡಬೇಕು. ಈ ಘೋರ ಹತ್ಯೆಗೆ ಪ್ರತ್ಯಕ್ಷ ಸಾಕ್ಷಿಗಳು ಹೇಳಿಕೆ ನೀಡಿರುವುದರಿಂದ ಈ ಹತ್ಯೆಯನ್ನು ಕೊಲೆ ಎಂದು ಪರಿಗಣಿಸಿ ಇದರ ವಿರುದ್ಧ FIR ದಾಖಲಿಸುವುದು.

(3) ಇತರ 16 ಆದಿವಾಸಿಗಳ ಮೇಲೆ ಸುಳ್ಳು ಆರೋಪ ಹೊರಿಸಿ ಅಪರಾಧ ದಾಖಲು ಮಾಡಿರುವುದನ್ನು ಹಿಂತೆಗೆದುಕೊಂಡು ತಕ್ಷಣ ಅವರನ್ನು ಬಿಡುಗಡೆ ಮಾಡುವುದು.

(4) ಪೊಲೀಸರು ಎಸಗಿದ ಈ ಗಲಭೆಯಲ್ಲಿ ಗಾಯಗೊಂಡವರಿಗೆಲ್ಲಾ ಧನಸಹಾಯ ನೀಡಬೇಕು.

(5) ಆದಿವಾಸಿ ಜನಾಂಗದ ಎಳೆ ಬಾಲೆಯ ಮೇಲೆ ಅತ್ಯಾಚಾರ ಎಸಗಿದ ಬಾಬಾ ಸಾಹೇಬ್ ಚವ್ಹಾಣ್ ವಿರುದ್ಧ ದಾಖಲಾದ ತನಿಖೆ ನಡೆಸಬೇಕು. ಈ ಕೇಸು IPCಸೆಕ್ಷನ್ 354ರ (ಹಲ್ಲೆ ಮತ್ತು ಅತ್ಯಾಚಾರ) ಅಡಿಯಲ್ಲಿ ದಾಖಲಾಗಿದೆ. ಅದರ ಬದಲಾಗಿ 376ರ 511ನೇ IPC (ಲೈಂಗಿಕ ಅತ್ಯಾಚಾರ)ಯ ಅಡಿಯಲ್ಲಿ ದಾಖಲಾಗಬೇಕು ಮತ್ತು ಅತ್ಯಂತ ಜರೂರಾಗಿ ವಿಚಾರಣೆ ನಡೆಸಬೇಕು.

*ಆಧಾರ: ಇನ್‌ಸಾಫ್*, ಮುಂಬಯಿ

## ಓದುಗರ ಅನಿಸಿಕೆಗಳು

ಮಹಿಳೆಯರ ಶೋಷಣೆಯ ಮೇಲೆ ಬೆಳಕು ಚೆಲ್ಲುವ ಘಟನೆಗಳನ್ನೊಳಗೊಂಡ ಲೇಖನಗಳು ಯಥೋಚಿತವಾಗಿ ಮೂಡಿಬಂದಿದೆ. ಶೋಷಿತ ವ್ಯವಸ್ಥೆಗೆ ಮಂಗಳ ಹಾಡಿ ಪ್ರತಿಭಟನೆಯ ಧ್ವನಿಗೆ ಪ್ರೇರಕವಾಗಬೇಕೆನ್ನುವ ನಿಮ್ಮ ಉದ್ದೇಶ ಸ್ತುತ್ಯವಾಗಿದೆ.

*- ನಿರ್ಮಲಾ ಮೃತ್ಯುಂಜಯಸ್ವಾಮಿ, ಧಾರವಾಡ*

ಸ್ವಾತಂತ್ರ್ಯ ನಂತರ ಮಹಿಳೆಯರ ಸ್ಥಾನಮಾನ, ಸಮಾನತೆ ರಕ್ಷಿಸಲು ಸಂವಿಧಾನದಲ್ಲೇ ಅನೇಕ ಸವಲತ್ತುಗಳು ಹಕ್ಕುಗಳಾಗಿದ್ದರೂ, ಪುರುಷ ಪ್ರಧಾನ ಸಮಾಜದಲ್ಲಿ ನಾವಿಂದು ಅನೇಕ ಸ್ತರಗಳಲ್ಲಿ ಎದುರಿಸುತ್ತಿರುವ, ಅನುಭವಿಸುತ್ತಿರುವ, ಸಮಸ್ಯೆಗಳ ಸಂದಿಗ್ಧತೆಗಳ ಅನೇಕ ಮಗ್ಗುಲುಗಳನ್ನು ಪರಿಚಯಿಸುವಲ್ಲಿ ನಿಜಕ್ಕೂ ಮಾನಸಿ ಯಶಸ್ವಿಯಾಗಿದೆ.

ನೆಮ್ಮದಿಯ ಜೀವನದ ಮಿಥ್ಯಾ ಭ್ರಮೆಯ ಬೆನ್ನೇರಿ ಅದೆಷ್ಟು ನೋವು, ಅಪಮಾನಗಳನ್ನು ತಾಳ್ಮೆಯ ಹೆಸರಿನಲ್ಲಿ ನುಂಗುವ, ಅನ್ಯಾಯವನ್ನು ಪ್ರತಿಭಟಿಸದೇ ಸಹಿಸುವ ಅನಿವಾರ್ಯತೆಯಲ್ಲೋ ಅಥವಾ ಆತ್ಮಘಾತುಕತನದಲ್ಲೋ, ನಮ್ಮನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. ಆದರಿಂದ ಹೊರಬರುವ ವಾಸ್ತವಿಕ ವಾಗಿ ವಿಚಾರ ಮಾಡುವ ದಿಶೆಯಲ್ಲಿ ಮಾನಸಿ ನಮ್ಮಲ್ಲಿ ಸೋದರಿಯರಿಗೆ ದಾರಿದೀಪ, ಆಶಾದೀಪವಾಗಿದೆ.

*- ವಾಸಂತಿ ಪ್ರಭಾಕರ ನಾಯಕ, ಚಿತ್ರದುರ್ಗ*

# ಸಾಥಿನ್ ಹೋರಾಟಕ್ಕೆ ಸಂದ ಗೆಲುವು

ಸರ್ವೋಚ್ಛ ನ್ಯಾಯಾಲಯದಲ್ಲಿ 'ಸಾಥಿನ್'ಗಳ ಗೆಲುವು ಸುಮಾರು ಹತ್ತು ವರುಷಗಳಿಂದ ಹೋರಾಟ ನಡೆಸುತ್ತಿದ್ದ ಕೇಕ್ರಿ ಜಿಲ್ಲೆಯ (ರಾಜಾಸ್ಥಾನ) ಐವರು 'ಸಾಥಿನ್'ಗಳನ್ನು ಉದ್ಯೋಗಕ್ಕೆ ಮರಳಿ ಸೇರಿಸಿಕೊಳ್ಳಲು ಸರ್ವೋಚ್ಛ ನ್ಯಾಯಾಲಯ ರಾಜಾಸ್ಥಾನ ಸರ್ಕಾರಕ್ಕೆ ಆದೇಶ ನೀಡಿದೆ. ನ್ಯಾಯ ಮೂರ್ತಿಗಳಾದ ಶ್ರೀ ಎಸ್. ರಾಜೇಂದ್ರಬಾಬು ಮತ್ತು ಶ್ರೀ ಶಿವರಾಜ್‌ರವರು, ಗೀತ, ಜುಮ್ಮಾ, ನಾವಸರ್, ನಂದು ಮತ್ತು ರಾಜಾಸ್ಥಾನದ ಸರ್ಕಾರದ ನಡುವೆ ಇದ್ದ ಮೊಕದ್ದಮೆಗೆ ಸಂಬಂಧಪಟ್ಟಂತೆ ಫೆಬ್ರವರಿ 28, 2001ರಂದು ಈ ತೀರ್ಪು ನೀಡಿದ್ದಾರೆ.

ಹತ್ತು ವರುಷಗಳಿಂದ ಒಗ್ಗಟ್ಟು, ಧೈರ್ಯ ಮತ್ತು ಬತ್ತಿಹೋಗದ ಚೇತನಗಳನ್ನು ಪ್ರದರ್ಶಿಸಿದ 'ಸಾಥಿನ್'ಗಳ ಹೋರಾಟಕ್ಕೆ ಈ ಗೆಲುವು ಸಾಕ್ಷಿಯಾಗಿದೆ.

**ಮೊಕದ್ದಮೆಯ ಹಿನ್ನೆಲೆ**

ರಾಜಾಸ್ಥಾನದ ಸರ್ಕಾರದ ಒಂದು ಅಂಗವಾದ "ವಿಮೆನ್ ಡಿವಲಪ್‌ಮೆಂಟ್ ಪ್ರೊಗ್ರಾಮ್"ನಲ್ಲಿ ಕೆಲಸ ಮಾಡುತ್ತಿರುವ ಈ 'ಸಾಥಿನ್'ಗಳು ಜಾತೀಯತೆ, ಊಳಿಗಮಾನ್ಯತೆ ಮತ್ತು ಪಿತೃಪ್ರಧಾನತೆ ತಾಂಡವವಾಡುತ್ತಿರುವ ಈ ರಾಜ್ಯದಲ್ಲಿ ಬದಲಾವಣೆಯ ಪ್ರತೀಕವಾಗಿ ಗೋಚರಿಸಿದ್ದಾರೆ. ಗ್ರಾಮಾಂತರ ಮಟ್ಟದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಇವರಿಗೆ ಕೇವಲ ರೂ. 300/- ವೇತನ ದೊರೆಯುತ್ತದೆ. ಬಾಲ್ಯ ವಿವಾಹ ತಡೆಯುವುದು, ಹೆಂಡತಿಯರಿಗೆ ಹೊಡೆಯುವುದನ್ನು ತಡೆಯುವುದು, ಸರ್ಕಾರದ ಕುಟುಂಬ ಯೋಜನೆ ಕಾರ್ಯಕ್ರಮ ಹಾಗೂ ಸೋಂಕು ತಡೆಗಟ್ಟುವ ಕಾರ್ಯಕ್ರಮಗಳನ್ನು ಜಾರಿಗೆ ತರುವುದು ಹಾಗೂ ಸಾಲ ವಿತರಣೆ, ಉಳಿತಾಯ ಯೋಜನೆ ರೂಪಿಸಿ ಜಾರಿಗೆ ತರುವುದು ಇತ್ಯಾದಿಗಳೊಂದಿಗೆ ಇನ್ನೂ ಹಲವು (64) ಕಾರ್ಯಕ್ರಮಗಳ ಪಟ್ಟಿ ರಾಜಾಸ್ಥಾನ ಸರ್ಕಾರ ಈ ಸಾಥಿನ್‌ಗಳಿಗೆ ನೀಡಿದೆ.

ಗ್ರಾಮೀಣ ಮಹಿಳೆಯರ ಶಕ್ತಿಯಾಗಿ ಈ ಥಿಮೆನ್ ಡೆವಲಪ್‌ಮೆಂಟ್ ಪ್ರೊಗ್ರಾಮ್ (WDP) ರೂಪು ಪಡೆಯುತ್ತಿರುವ ಸಂದರ್ಭದಲ್ಲಿ ಸಾಥಿನ್‌ಗಳು ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಚಕಾರವೆತ್ತಿದಾಗ ಇವರನ್ನು ರಾಜಾಸ್ಥಾನ ಸರ್ಕಾರ ಬಲಿಪಶುಗಳನ್ನಾಗಿಸಿದೆ. ರಾಜಾಸ್ಥಾನ ಸರ್ಕಾರವು 15-2-91ರಂದು ಯಾವುದೇ ಕಾರಣಗಳನ್ನು ನೀಡದೆ ಸ್ವೇಚ್ಛಾನುಸಾರ ವರ್ತನೆಯಿಂದ ಕೇಕ್ರಿ ಪಂಚಾಯತ್ (ನಯಾಗಾವ್, ಚಬಾಡಿಯ, ಮಂಡವಾಸ್, ಅಮ್ನಿ ಮತ್ತು ದೇವಲಿಯಾ ಗ್ರಾಮಗಳು) ಅಡಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಐವರು 'ಸಾಥಿನ್'ಗಳನ್ನು ವಜಾ ಮಾಡಿತು.

**ರಾಜಾಸ್ಥಾನ ಉಚ್ಚ ನ್ಯಾಯಾಲಯದಲ್ಲಿ ನಡೆದ ಮೊಕದ್ದಮೆ ಬಗ್ಗೆ**

1992ರ ಮಾರ್ಚ್ 10ರಂದು ಉಚ್ಚ ನ್ಯಾಯಾಲಯವು 'ಸಾಥಿನ್'ಗಳನ್ನು ವಜಾ ಮಾಡಿದ ಆದೇಶವನ್ನು ತಳ್ಳಿಹಾಕಿ 'ಸಾಥಿನ್'ಗಳನ್ನು ಮತ್ತೆ ಉದ್ಯೋಗಕ್ಕೆ ಸೇರಿಸಿಕೊಳ್ಳುವಂತೆ ಆದೇಶ ನೀಡಿತ್ತು. ಸಾಮಾನ್ಯ ನ್ಯಾಯ ನಿಯಮವನ್ನು ರಾಜಾಸ್ಥಾನ ಸರ್ಕಾರ ಉಲ್ಲಂಘಿಸಿದೆ ಎಂದು ಉಚ್ಚ ನ್ಯಾಯಾಲಯ ದೂಷಿಸಿತ್ತು. ನ್ಯಾಯಾಲಯ ಅನುಮತಿ ನೀಡಿದರು ರಾಜಾಸ್ಥಾನದ ಸರ್ಕಾರ 'ಸಾಥಿನ್'ಗಳನ್ನು ಕೆಲಸಕ್ಕೆ ಹಾಜರಾಗಲು ಅನುಮತಿ ನೀಡಲಿಲ್ಲ. ಕಂಗಾಲಾದ ಸಾಥಿನ್‌ಗಳು ಮತ್ತೆ ಉಚ್ಚ ನ್ಯಾಯಾಲಯದ ಮೊರೆ ಹೊಕ್ಕರು. ಇಬ್ಬರು ನ್ಯಾಯವಾದಿಗಳ ಸಮ್ಮುಖದಲ್ಲಿ ನೀಡಿದ ತೀರ್ಪು 'ಸಾಥಿನ್'ಗಳನ್ನು ಅಧೀರರನ್ನಾಗಿಸಿತು. ಮತ್ತೆ ಸರ್ಕಾರ ಗೆದ್ದಿತ್ತು. ಸತತ 5 ವರುಷಗಳಿಂದ ನ್ಯಾಯಕ್ಕಾಗಿ ಕಾದು ಕುಳಿತ ಸಾಥಿನ್‌ಗಳು ಸರ್ಕಾರಿ ನೌಕರರಲ್ಲ ಎಂದು ಘೋಷಿಸಿತು. 'ಸಾಥಿನ್'ಗಳನ್ನು ಸ್ವಯಂ ಸೇವಕರೆಂದು ಕರೆಯಿತು. ಸರ್ಕಾರಿ ನೌಕರರೆಂದು ಅವರು ತಮ್ಮ ಹಕ್ಕು ಚಲಾಯಿಸಲು ನ್ಯಾಯಾಂಗದಲ್ಲಿ ಅವಕಾಶವಿಲ್ಲ ಎಂದಿತು. ಸಾಮಾನ್ಯ ನ್ಯಾಯ ನಿಯಮ ಕೂಡ ಇವರಿಗೆ ಅನ್ವಯಿಸುವುದಿಲ್ಲ ಎಂದು ವಾದಿಸಿತು. 'ಸಾಥಿನ್'ಗಳು ಗ್ರಾಮೀಣ ಮಹಿಳೆಯರ ಬದುಕನ್ನು ಚೇತನಗೊಳಿಸುವ ಪಾತ್ರವಹಿಸಬೇಕು ಎಂಬ ಧೋರಣೆ ತೋರಿತು. ನ್ಯಾಯಾಂಗವು 'ಸಾಥಿನ್'ಗಳ ವಿಷಯದಲ್ಲಿ ಈ ರೀತಿಯಾದ ಕಾರ್ಮಿಕ ವಿರೋಧಿ ಧೋರಣೆ ತಳೆದಿರುವುದು ಶೋಚನೀಯ. ಹೋರಾಟದ ಕಣಕ್ಕೆ ಇಳಿದು, ಸತತ 5 ವರುಷ ಉಚ್ಚ ನ್ಯಾಯಾಲಯದಲ್ಲಿದ್ದ ಮೊಕದ್ದಮೆಗೆ ಈ ತಿರುವು ಬರಲು ಸಾಥಿನ್‌ಗಳು ನಮ್ಮ ದೇಶದ ನ್ಯಾಯಾಂಗದಲ್ಲಿ ಭರವಸೆ ಇಟ್ಟು ಸರ್ವೋಚ್ಛ ನ್ಯಾಯಾಲಯದ ಮೊರೆಹೊಕ್ಕರು. ಅಲ್ಲಿ ಸಾಥಿನ್‌ಗಳಿಗೆ ವಿಜಯಗಳಾದರೂ ಸರ್ವೋಚ್ಛ ನ್ಯಾಯಾಲವೂ ಕಾರ್ಮಿಕ ವಿರೋಧಿ ಧೋರಣೆ ತಳೆದಿರುವುದು ವ್ಯಕ್ತವಾಗುತ್ತದೆ.

(1) 'ಸಾಥಿನ್'ಗಳಿಗೆ ನ್ಯಾಯ ಸಮ್ಮತವಾಗಿ ಸಲ್ಲಬೇಕಾಗಿದ್ದ ಹಣದ ಬಾಕಿ ಪಡೆಯಲು ಅವರಿಗೆ ಹಕ್ಕು ಇರುವುದಿಲ್ಲವೆಂದು ಆದೇಶ ನೀಡಿದೆ. ಇದರಿಂದಾಗಿ ಒಬ್ಬೊಬ್ಬ 'ಸಾಥಿನ್'ಗಳಿಗೆ ಸುಮಾರು ರೂ. 39,000 ನಷ್ಟ ಆಗಿದೆ.

(2) 'ಸಾಥಿನ್'ಗಳನ್ನು ಸರ್ಕಾರಿ ನೌಕರರಲ್ಲವೆಂದು ಪರಿಗಣಿಸಿ, ಈ ದೇಶದ ಯಾವುದೇ ಕಾರ್ಮಿಕ ಕಾನೂನುಗಳು ಅವರಿಗೆ ಅನ್ವಯಿಸುವುದಿಲ್ಲ ಎಂಬ ಧೋರಣೆ ತೋರಿದೆ.

(3) ಭತ್ಯೆ, ಸಿನಿಯಾರಿಟಿ, ಇನ್ನಿತರೆ ಸೌಲಭ್ಯಗಳು ಸಾಮಾನ್ಯ ನ್ಯಾಯ ನಿಯಮದ ಅಡಿಯಲ್ಲಿ ಬರುವುದಿಲ್ಲ ಎಂದು ಪರಿಗಣಿಸಿದ್ದರಿಂದ ಅದರಿಂದ ಕೂಡ ವಂಚಿತರಾಗಿದ್ದಾರೆ.

ರಾಜಾಸ್ಥಾನ ಸರ್ಕಾರದ ವಿಮೆನ್ ಡೆವಲಪ್‌ಮೆಂಟ್ ಪ್ರೊಗ್ರಾಮ್ ದೇಶಾದ್ಯಂತ ಮತ್ತು ಹೊರದೇಶಗಳಲ್ಲಿ ಸಾಕಷ್ಟು ಹೆಸರು ಪಡೆದಿದೆ. "ಶಕ್ತಿಯುತ ಮಹಿಳಾ ವರ್ಷ" ಎಂದು ಘೋಷಿಸಿರುವ ಹಿನ್ನೆಲೆಯಲ್ಲಿ ಈ ಕಾರ್ಯಕ್ರಮವನ್ನು ರಾಜಾಸ್ಥಾನ ಸರ್ಕಾರ ಈ ಹಿಂತೆಗೆದುಕೊಳ್ಳಲು ನಿರ್ಧರಿಸಿ ರುವುದು ಎಂತಹ ವಿಪರ್ಯಾಸ ಮತ್ತು ಅವಮಾನಕರ.

'ಸಾಥಿನ್'ಗಳ ಸಂಘಟನೆಯ ಬಲವನ್ನು ಗುರುತಿಸಿ ವಿಮೆನ್ ಡೆವಲಪ್‌ಮೆಂಟ್‌ನ ಕಾರ್ಯದರ್ಶಿ ಶ್ರೀ ಎ. ಕೆ. ಪಾಂಡೆಯವರು WDPಯ ಭವಿಷ್ಯದ ಬಗ್ಗೆ ಯಾವುದೇ ರೀತಿಯ ನಿರ್ಧಾರ ತೆಗೆದುಕೊಳ್ಳುವಲ್ಲಿ 'ಸಾಥಿನ್'ಗಳ ಸಂಘಟನೆ ಮತ್ತು ರಾಜಾಸ್ಥಾನ ಸರ್ಕಾರದ ಮಹಿಳಾ ಸಂಘಟನೆಗಳು ಭಾಗಿಯಾಗಿರುತ್ತವೆ ಎಂದು ಒಪ್ಪಿಕೊಂಡಿದ್ದಾರೆ. 'ಸಾಥಿನ್'ಗಳ ಸಂಘಟನೆಯು ಬಡತನ ವಿರೋಧಿ, ಕಾರ್ಮಿಕ ವಿರೋಧಿ ನೀತಿಯ ವಿರುದ್ಧ ಹೋರಾಟ ನಡೆಸಲು ನಿರ್ಧರಿಸಿದೆ.

*(Extract from the Press Release)*

## ಬುದ್ಧ ನಗಬೇಡ

ಬೇಡ ಬೇಡ, ಬೇಡವೇ ಬೇಡ
ಬುದ್ಧ ನೀನು ನಗಲೇ ಬೇಡ

ರಾಜಾಸ್ತಾನದ ಬರಡು ನೆಲದಲ್ಲಿ
ನಿನ್ನ ನಗೆಯ ಬಾಂಬು ಸಿಡಿದು ಬಿತ್ತು
ಮಂದಹಾಸದ ನಗೆಯ ಮಲ್ಲಿಗೆಯು ಮುರುಟಿ
ಸಾವಿನ ಗೋರಿಗೆ ವಿಜಯದ ಮುತ್ತು

ತಿನ್ನುವ ಬಾಯಿಗೆ ಬೆಂಕಿಯ ಉಂಡೆ
ಹಸಿದ ಹೊಟ್ಟೆಯ ಕಾವು ನೀಗೀಸಿತೆ?
ದುಡಿಯುವ ಕೈಗಳಿಗೆ ರೋಗದ ನಂಟು
ನಿನ್ನ ನಗೆಯ ಅರ್ಥ ಕನಸಿನ ಗಂಟು

ಹೊಟ್ಟೆಲಿರುವ ಕಂದ ಕರಗಿ ನೀರಾಗಿ
ತೂಗುವ ತೊಟ್ಟಿಲು ಎಂದೆಂದು ಬರಿದಾಗಿ
ಮುದ್ದಿಡುವ ಕಂದನಿಗೆ ಮುಖವೇ ಇಲ್ಲದಾಗಿ
ವಿಕೃತಿಯ ಕಥೆಗೆ ಪ್ರಗತಿಯ ಬಣ್ಣ

❑ *ರಾಜೇಶ್ವರಿ ಎಚ್. ಎಸ್.*

*ಹೆಣ್ಣು ಯಾವಾಗಲೂ ಧಾರ್ಮಿಕ, ಸಾಮಾಜಿಕ ಅಥವಾ ಆರ್ಥಿಕ ಅನ್ಯಾಯಗಳಿಗೆ ಬಲಿಯಾಗಿದ್ದಾಳೆ. ಕಟ್ಟಲೆ ರೂಪಿಸುವ ಗಂಡು ಬಹುಪಾಲು ತಾನೇ ಅವುಗಳಿಂದ ಹೊರಗಾಗಿದ್ದಾನೆ.*

*ಡಾ|| ಬಿ. ಆರ್. ಅಂಬೇಡ್ಕರ್*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2001

BOOK -POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067